ಪ್ರಚಾರ ಪುಸ್ತಕ ಮಾಲೆ

252

# ಮಾವೋ ತ್ಸೆ-ತುಂಗ್

ಉ. ಕಾ. ಸುಬ್ಬರಾಯಾಚಾರ್



ಪ್ರಚಾರ ಪುಸ್ತಕಮಾಲೆ–೨೫೨

# ಮಾವೋ ತ್ಸೆ-ತುಂಗ್

ಉ. ಕಾ. ಸುಬ್ಬರಾಯಾಚಾರ್




೧೯೮೭

## ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾ ನಿಲಯದ ವಿದ್ಯೆ, ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸ ಗಳನ್ನು ಏರ್ಪಡಿಸಿ, ಸಂಸ್ಕೃತಿಯ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷ ಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲೆಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶವಿಲ್ಲ ದವರಿಗೆ ವಿಶ್ವವಿದ್ಯಾನಿಲಯ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ, ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ಅವರ ದುಃಖಕ್ಕೆ ಮೂಲ ಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆಯು ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆ ಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿ ವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ

ವಿಷಯಗಳನ್ನು ಕುರಿತ ಇನ್ನೂರ ಐವತ್ತೊಂದು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷ ವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಉ. ಕಾ. ಸುಬ್ಬರಾಯಾಚಾರ್ ಅವರ 'ಮಾವೋ ತ್ಸೆ-ತುಂಗ್' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

**ವೈ. ಪಿ. ರುದ್ರಪ್ಪ**
ಕುಲಪತಿಗಳು

# ಪರಿವಿಡಿ

## ೧. ಪೀಠಿಕೆ

ಪ್ರಪಂಚದ ಅತಿ ಹೆಚ್ಚಿನ ಜನಸಂಖ್ಯೆಯಿಂದ ಕೂಡಿದ ರಾಷ್ಟ್ರ ಚೀಣಾ. ಭೂವಿಸ್ತೀರ್ಣದಲ್ಲಿ ಸೋವಿಯೆತ್ ದೇಶ ಪ್ರಪಂಚದಲ್ಲಿ ಮೊದಲನೆಯದು, ಎರಡನೆಯದು ಕೆನಡಾ. ಮೂರನೆಯದು ಚೀಣಾ. ಕನ್‌ಫ್ಯೂಸಿಯಸ್ ಚೀಣೀಯರ ಮೇಲೆ ತುಂಬ ಪ್ರಭಾವ ಬೀರಿದ ವ್ಯಕ್ತಿ. ಆತನ ತತ್ತ್ವಗಳು ಕ್ರಿ.ಪೂ. ೫೫೧ ರಿಂದ ಕ್ರಿ.ಶ. ಹತ್ತೊಂಬತ್ತನೆಯ ಶತಮಾನದ ಆದಿಭಾಗದವರೆಗೂ ಚೀಣೀ ಜನತೆಯ ಮೇಲೆ ಪ್ರಭಾವ ಬೀರಿದವು. ಕ್ರಮೇಣ ಬೌದ್ಧ ಧರ್ಮವೂ ಚೀಣಾದಲ್ಲಿ ಪ್ರಸಾರವಾಯಿತು. ಕ್ರಿ.ಪೂ. ೧೬೦೦ ರಿಂದ ಕ್ರಿ.ಶ. ೧೯೧೧ರ ವರೆಗೆ ಹಲವು ರಾಜವಂಶದವರು ಚೀಣಾ ದೇಶವನ್ನು ಆಳಿದರು. ಕಡೆಯ ರಾಜರು ಮಂಚು ವಂಶಕ್ಕೆ ಸೇರಿದವರು.

ಚೀಣಾದೊಡನೆ ಮೊದಲು ವ್ಯಾಪಾರಕ್ಕೆ ಆರಂಭಿಸಿದ ವಿದೇಶಿಯರಲ್ಲಿ ಪೋರ್ಚುಗೀಸರೇ ಮೊದಲಿಗರು. ಅವರು ಚೀಣಾ ಪ್ರವೇಶಿಸಿದ್ದು ಕ್ರಿ.ಶ. ೧೫೧೪ರಲ್ಲಿ. ಇವರ ಬಳಿಕ ವ್ಯಾಪಾರಕ್ಕೆ ಆರಂಭಿಸಿದವರು ಡಚ್ಚರು ಮತ್ತು ಇಂಗ್ಲಿಷರು. ಇವರೆಲ್ಲ ಕ್ಯಾಂಟನ್‌ನಲ್ಲಿ ನೆಲಸಿ, ವ್ಯಾಪಾರ ಮಾಡಲು ಆರಂಭಿಸಿದರು. ಅಫೀಮನ್ನು ಚೀಣೀಯರಿಗೆ ಮಾರಿ, ಅಪಾರ ಹಣ ಸಂಪಾದನೆ ಮಾಡುತ್ತಿದ್ದವರು ಇಂಗ್ಲಿಷರು. ಚೀಣೀಯರು ಹೆಚ್ಚು ಸಂಖ್ಯೆಯಲ್ಲಿ ಅಫೀಮಿನ ದುರಭ್ಯಾಸಕ್ಕೆ ತುತ್ತಾಗಿ ಹತ ಚೇತಸರಾದರು. ಅಫೀಮಿನ ಹಾವಳಿಯನ್ನು ನಿವಾರಿಸಲು ಚೀಣೀ ಸರ್ಕಾರ ಅಫೀಮಿನ ವ್ಯಾಪಾರವನ್ನು ಬಹಿಷ್ಕರಿಸಿತು. ಲಾಭಕೋರ ಬ್ರಿಟಿಷರು ಕುಪಿತರಾಗಿ ಚೀಣಾದ ಮೇಲೆ ಯುದ್ಧ

ವನ್ನೇ ಆರಂಭಿಸಿದರು. ಸುಸಜ್ಜಿತವಾದ ಬ್ರಿಟಿಷ್ ಸೈನ್ಯ, ಚೀಣೀ ಸೈನ್ಯವನ್ನು ಸೋಲಿಸಿತು. ಕ್ರಿ.ಶ. ೧೮೪೨ರಲ್ಲಿ ಚೀಣಾ ಬ್ರಿಟಿಷ ರೊಡನೆ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಈ ಒಪ್ಪಂದದಿಂದ ಬ್ರಿಟಿಷರಿಗೆ ಅನೇಕ ಸೌಲಭ್ಯಗಳು ದೊರಕುವಂತಾಯಿತು. ಅಫೀಮಿನ ವ್ಯಾಪಾರ ಮುಂದುವರಿಯಿತು.

೧೮೬೦ರಲ್ಲಿ ಸ್ವಾರ್ಥಿಗಳಾದ ಬ್ರಿಟಿಷರೂ, ಫ್ರೆಂಚರೂ, ಅಮೆರಿಕನ್ನರೂ ಒಟ್ಟಾಗಿ ಚೀಣಾದಮೇಲೆ ಯುದ್ಧಮಾಡಿ, ಚೀಣಾದ ಕೆಲವು ಪ್ರದೇಶಗಳ ಮೇಲೆ ಪ್ರಭುತ್ವವನ್ನು ಸ್ಥಾಪಿಸಿ ಕೊಂಡರು. ಚೀಣಾ ದೇಶದಲ್ಲಿ ಮಂಚು ಸರ್ಕಾರ ಬಿಗಿಯಾಗಿಲ್ಲದ ಕಾರಣ ಅಂತರ್ಯುದ್ಧಗಳು ಪ್ರಾರಂಭವಾದುವು. ೧೮೯೪ ರಲ್ಲಿ ಜಪಾನ್ ದೇಶವು ಚೀಣಾ ದೇಶದ ಮೇಲೆ ಧಾಳಿ ಮಾಡಿ, ಚೀಣಾದ ಹಲವು ಪ್ರದೇಶಗಳನ್ನು ಆಕ್ರಮಿಸಿಕೊಂಡಿತು. ಇದೇ ಸಮಯದಲ್ಲಿ ವಿದೇಶೀಯ ಪಾದ್ರಿಗಳು, ಚೀಣೀಯರನ್ನು ಮತಾಂತರಗೊಳಿಸುವ ಕಾರ್ಯದಲ್ಲಿ ತೊಡಗಿದರು. ಆಗ ಕೆಲವು ದೇಶಪ್ರೇಮಿಗಳಾದ ಚೀಣೀಯರು, ಪಾದ್ರಿಗಳ ಕಾರ್ಯವನ್ನು ವಿರೋಧಿಸಿದರು. ಕ್ರಮೇಣ ಆ ವಿರೋಧ ಕ್ರಾಂತಿಯ ರೂಪ ತಾಳಿತು. ಆದರೆ ಆ ಕ್ರಾಂತಿಯನ್ನು ಬ್ರಿಟಿಷರೂ, ಅಮೆರಿಕನ್ನರೂ ಅಮಾನುಷ ರೀತಿಯಲ್ಲಿ ಹತ್ತಿಕ್ಕಿದರು. ಅದರಿಂದ ಅವರ ಪ್ರತಿಷ್ಠೆ ಬೆಳೆದು, ಚೀಣೀಯರ ತೇಜೋವಧೆಯಾಯಿತು. ದಿನ ಗಳು ಕಳೆದಂತೆ ಚೀಣೀಯರು ದುರ್ಬಲರಾದರು. ದಾರಿದ್ರ್ಯವೇ ಜನಸಾಮಾನ್ಯರ ಸ್ಥಿತಿಯಾಯಿತು. ಬ್ರಿಟಿಷರೂ, ಅಮೆರಿಕನ್ನರೂ ಪ್ರವರ್ಧಮಾನಕ್ಕೆ ಬರುತ್ತ, ಚೀಣೀಯರನ್ನು ಅಧೋಗತಿಗೆ ತಳ್ಳುವುದರಲ್ಲಿ ಸಮರ್ಥರಾದರು.

ಚೀಣಾ ಇಂತಹ ವಿಪತ್ತನ್ನು ಎದುರಿಸಿ, ದುರ್ಬಲವಾದಾಗ,

ಮಾವೋ ತ್ಸೆ-ತುಂಗ್ ನವಚೀಣಾದೇಶವನ್ನು ರೂಪಿಸಿದ ಮಹಾ ನಾಯಕ.

## ೨. ಬಾಲ್ಯ ಮತ್ತು ವಿದ್ಯಾಭ್ಯಾಸ

ಚೀಣಾದ ದಕ್ಷಿಣ ಭಾಗದಲ್ಲಿರುವ ಹುನಾನ್ ಪ್ರಾಂತ ಮರ ಗಿಡಗಳಿಂದ ತುಂಬಿ ಸುಂದರವಾಗಿ ಕಾಣುವ ಪ್ರದೇಶ. ಆ ಪ್ರಾಂತದ ಷಾವೋಷಾನ್ ಎಂಬ ಗ್ರಾಮದಲ್ಲಿ ಮಾವೋ ತ್ಸೆ-ತುಂಗ್ ಡಿಸೆಂಬರ್ ೨೬, ೧೮೯೩ ರಂದು ಜನ್ಮ ತಾಳಿದರು. ಅವರ ತಂದೆ, ಮಾವೋ ಷುನ್-ಷೆಂಗ್. ಅವರು ಪ್ರವರ್ಧಮಾನಕ್ಕೆ ಬಂದ ರೈತರು. ಅವರ ತಾಯಿ ವೆನ್ ಛೀ-ಮಿಾ. ಸುಸಂಸ್ಕೃತ ಮಹಿಳೆ, ಗೃಹಕಾರ್ಯದಲ್ಲಿ ನಿಷ್ಣಾತರು. ಬೌದ್ಧಧರ್ಮದಲ್ಲಿ ಅಪಾರ ಶ್ರದ್ಧೆ ಇದ್ದವರು. ಮಾವೋಗೆ ಮಾವೋ ತ್ಸೆ-ಮಿನ್ ಮತ್ತು ಮಾವೋ ತ್ಸೆ-ತಾನ್ ಎಂಬ ಇಬ್ಬರು ಸಹೋದರರು. ತಂಗಿಯರಿರಲಿಲ್ಲ. ಆದಕಾರಣ ತಂದೆತಾಯಿಯರು ಮಾವೋ ತ್ಸೆ-ಹುಂಗ್ ಎಂಬ ಹುಡುಗಿಯನ್ನು ತಮ್ಮ ಸಾಕು ಮಗಳಾಗಿ ಬೆಳೆಸಿದರು. ಮಾವೋಗೆ ಚಿಕ್ಕಂದಿನಿಂದಲೂ ತಾಯಿಯಲ್ಲಿ ಅಪಾರ ಗೌರವ ಹಾಗೂ ಪ್ರೀತಿ.

ಗ್ರಾಮದ ಖಾಸಗಿ ಶಾಲೆಯಲ್ಲಿ ಮಾವೋ ತನ್ನ ಎಂಟರಿಂದ ಹದಿಮೂರನೆ ವಯಸ್ಸಿನವರೆಗೆ ವಿದ್ಯಾಭ್ಯಾಸ ಮಾಡಿದನು. ಮುಂದೆ ಓದಲು ಅವನಿಗೆ ಆಸಕ್ತಿ ಇದ್ದರೂ ತಂದೆಯ ಆಜ್ಞೆಯಂತೆ ಅವನು ಮನೆಯ ಹೊಲದಲ್ಲಿಯೇ ಕೆಲಸ ಮಾಡಬೇಕಾಯಿತು. ಓದುವ ಚಟವನ್ನು ಬೆಳೆಸಿಕೊಂಡಿದ್ದ ಮಾವೋ ಹೊಲದಲ್ಲಿ ಕೆಲಸಕ್ಕೆ ಹೋಗುವಾಗಲೂ ಪುಸ್ತಕವನ್ನು ತೆಗೆದುಕೊಂಡು ಹೋಗುತ್ತಿದ್ದನು. ಹೊಲದಿಂದ ಬಂದ ಮೇಲೆಯೂ ಪುಸ್ತಕಾ

ಭ್ಯಾಸ ಅವನಿಗೆ ಸಂತೋಷವನ್ನುಂಟುಮಾಡುತ್ತಿತ್ತು. ಮಗನ ವರ್ತನೆ ತಂದೆಗೆ ಸರಿಬೀಳಲಿಲ್ಲ. ಕಡೆಗೆ ತಂದೆಯ ಇಚ್ಛೆಗೆ ವಿರುದ್ಧವಾಗಿ, ಹಳ್ಳಿಯ ಮನೆಯಿಂದ ಹೊರಟು, ತಂಗ್ ಷಾನ್ ಪ್ರದೇಶದಲ್ಲಿದ್ದ ಉನ್ನತ ಪ್ರಾಥಮಿಕ ಶಾಲೆಗೆ ಸೇರಲು ಸುಮಾರು ಇಪ್ಪತ್ತೈದು ಕಿಲೋಮೀಟರ್ ದೂರವನ್ನು ನಡೆದೇ ಮಾವೋ ಹೋದನು.

ಹದಿನಾರು ವರ್ಷದ, ಎತ್ತರದ, ಪುಷ್ಟವಾಗಿ ಬೆಳೆದ, ಮಾವೋನನ್ನು ನೋಡಿದೊಡನೆ ಅಲ್ಲಿಯ ಶಾಲೆಯ ಮುಖ್ಯೋಪಾಧ್ಯಾಯರು ಅವನನ್ನು ಶಾಲೆಗೆ ಸೇರಿಸಿಕೊಳ್ಳಲು ಮೊದಲು ಒಪ್ಪಲಿಲ್ಲ. ಏಕೆಂದರೆ, ಅಲ್ಲಿಯ ಶಾಲೆಯ ಮಕ್ಕಳು ಹನ್ನೆರಡು ವರ್ಷಗಳಿಗಿಂತ ದೊಡ್ಡವರಾಗಿರಲಿಲ್ಲ. ಮಾವೋನ ವಿದ್ಯಾಭ್ಯಾಸದ ಆಸಕ್ತಿಯನ್ನು ಕೇಳಿ, ಮುಖ್ಯೋಪಾಧ್ಯಾಯರು ಆರುತಿಂಗಳಕಾಲ ಪರೀಕ್ಷಿಸಲೆಂದು ತಾತ್ಕಾಲಿಕವಾಗಿ ಅವನು ಶಾಲೆಯನ್ನು ಸೇರಲು ಅನುಮತಿ ನೀಡಿದರು. ತಮಗಿಂತಲೂ ಎತ್ತರವಾಗಿ ಬಲಶಾಲಿಯಾಗಿ ಬುದ್ಧಿವಂತನಾದ ಮಾವೋನನ್ನು ಕಂಡು ಆ ಶಾಲೆಯ ಮಕ್ಕಳು ಹೆದರುತ್ತಿದ್ದರು. ಸತತಾಭ್ಯಾಸದಲ್ಲಿ ನಿರತನಾದ ಮಾವೋಗೆ ಅಧ್ಯಯನದಲ್ಲಿ ಮುಂದುವರಿಯುವುದು ಕಷ್ಟವಾಗಲಿಲ್ಲ. ಶಾಲೆಯ ವಿದ್ಯಾಭ್ಯಾಸ ಮುಗಿದ ಬಳಿಕ ಮಾವೋ ಹುನಾನ್ ಪ್ರಾಂತದ ಚಾಂಗ್‌ಷಾಕ್ಕೆ ಹೋಗಿ ಅಲ್ಲಿಯ ಮಾಧ್ಯಮಿಕ ಶಾಲೆಯನ್ನು ಸೇರಿಕೊಂಡನು.

ಚಾಂಗ್‌ಷಾದಲ್ಲಿ ಮಾವೋ, ವೃತ್ತಾಂತ ಪತ್ರಿಕೆಗಳನ್ನು ಅಧ್ಯಯನ ಮಾಡಿ, ತನ್ನ ವಿಚಾರಶಕ್ತಿಯನ್ನು ಬೆಳೆಸಿಕೊಂಡನು. ಡಾ॥ ಸನ್ ಯಾತ್–ಸೇನ್ ರ ವಿಚಾರಧಾರೆ ಅವನನ್ನು ಆಕರ್ಷಿಸಿತು. ಡಾ॥ ಸನ್ ಯಾತ್–ಸೇನ್, ದಕ್ಷಿಣ ಚೀಣಾದಲ್ಲಿ ೧೮೬೬ರಲ್ಲಿ

ಜನ್ಮತಾಳಿ, ಹವಾಯ್‌ಯಲ್ಲಿ ಬೆಳೆದು, ಹೊನಲೂಲುವಿನಲ್ಲಿ ಪ್ರಾರಂಭಿಕ ವಿದ್ಯಾಭ್ಯಾಸ ಮಾಡಿ, ಹಾಂಕಾಂಗಿನಲ್ಲಿ ವೈದ್ಯಕೀಯ ಶಿಕ್ಷಣ ಪಡೆದು ಪದವೀಧರರಾದವರು. ಕೆಲವು ಕಾಲ ವೈದ್ಯ ವೃತ್ತಿಯಲ್ಲಿದ್ದ ಅವರು, ಚೀಣಾದ ಮಂಚು ವಂಶದ ವಿರುದ್ಧ ಚಳುವಳಿಯನ್ನು ಆರಂಭಿಸಿ, ರಾಷ್ಟ್ರೀಯ ಸೇನೆಯನ್ನು ಕಟ್ಟಿದರು. ಅವರ ದೃಷ್ಟಿ, ರಾಜತ್ವವನ್ನು ಉರುಳಿಸಿ, ರಾಷ್ಟ್ರೀಯ ಸರ್ಕಾರ ವನ್ನು ಸ್ಥಾಪಿಸುವುದರ ಕಡೆ ಹರಿದಿತ್ತು. ವಿದ್ಯಾರ್ಥಿ ಮಾವೋಗೆ ಡಾ॥ ಸನ್‌ಯಾತ್ ಸೇನ್‌ರು ಗೌರವಾನ್ವಿತ ವ್ಯಕ್ತಿಯಾಗಿ ಕಂಡರು. ಅವರ ಬರವಣಿಗೆಯಿಂದ ಅವನು ಪ್ರಭಾವಿತನಾದನು.

ವಿದ್ಯಾರ್ಥಿಗಳೆಲ್ಲರೂ ಜುಟ್ಟು ಬಿಟ್ಟಿರುವುದು ಮಾವೋಗೆ ಅಸಹ್ಯವಾಗಿ ಕಂಡಿತು. ಅವನೂ ಅವನ ಮಿತ್ರನೂ ಪ್ರಾರಂಭದಲ್ಲಿ ತಮ್ಮ ಜುಟ್ಟನ್ನು ಕತ್ತರಿಸಿಕೊಂಡರು. ಅನಂತರ ಇತರ ವಿದ್ಯಾರ್ಥಿ ಗಳ ಜುಟ್ಟುಗಳನ್ನು ಕತ್ತರಿಸುವುದರಲ್ಲಿ ಅವರು ನಿಷ್ಣಾತರಾದರು. ವಿದ್ಯಾರ್ಥಿಗಳು ಮಾವೋನನ್ನು ಕ್ರಾಂತಿಕಾರಿಯೆಂದು ಕರೆದರು. ಅಕ್ಟೋಬರ್ ೯, ೧೯೧೧ ರಂದು ರಾಷ್ಟ್ರೀಯ ಸೈನ್ಯವು ಡಾ॥ ಸನ್ ಯಾತ್–ಸೇನ್ ಅವರ ಮಾರ್ಗದರ್ಶನದಲ್ಲಿ ಮಂಚು ರಾಜರ ಆಧಿಪತ್ಯದ ವಿರುದ್ಧವಾಗಿ ಹೋರಾಟವನ್ನು ಆರಂಭಿಸಿತು. ಕ್ರಾಂತಿಕಾರಿ ಮನೋಭಾವದ ಮಾವೋ ಶಾಲೆಯನ್ನು ಬಿಟ್ಟು ರಾಷ್ಟ್ರೀಯ ಸೈನ್ಯವನ್ನು ಸೇರಿಕೊಂಡನು. ಅವನು ಸೈನ್ಯದಲ್ಲಿ ಪ್ರಾಮಾಣಿಕನೂ, ಮಿತಭಾಷಿಯೂ, ನಿಷ್ಠಾವಂತನೂ ಆಗಿ ಕೆಲಸ ಮಾಡಿ ಸೈನ್ಯಾಧಿಕಾರಿಗಳಿಗೆ ಅಚ್ಚುಮೆಚ್ಚಾದನು. ರಾಷ್ಟ್ರೀಯ ಸೈನ್ಯವು ವುಚಾಂಗ್, ಹಾನ್ ಕೋ, ನಾನ್ ಕಿಂಗ್ ಮೊದಲಾದ ಪ್ರದೇಶಗಳನ್ನು ಕೈವಶಮಾಡಿಕೊಂಡಿತು. ಅಮೆರಿಕಾಕ್ಕೆ ಹೋಗಿದ್ದ ಡಾ॥ ಸನ್‌ಯಾತ್–ಸೇನ್ ಡಿಸೆಂಬರ್ ೨೯, ೧೯೧೧ ರಲ್ಲಿ ಚೀಣಾಕ್ಕೆ

ಹಿಂತಿರುಗಿ, ಚೀಣಾ ಗಣರಾಜ್ಯದ ಅಧ್ಯಕ್ಷರಾದರು. ಆರು ತಿಂಗಳ ಕಾಲ ಸೈನ್ಯದಲ್ಲಿದ್ದ ಮಾವೋ ಕ್ರಾಂತಿ ಫಲಪ್ರದವಾಗುತ್ತಿರುವುದನ್ನು ಕಂಡು, ಸೈನ್ಯವನ್ನು ಬಿಟ್ಟು ಶಾಲೆಯನ್ನು ಪುನಃ ಸೇರಿಕೊಂಡು ವಿದ್ಯಾಭ್ಯಾಸವನ್ನು ಮುಂದುವರಿಸಿದನು. ಮಾಧ್ಯಮಿಕ ಶಾಲೆಯ ವ್ಯಾಸಂಗ ಮುಗಿದ ಬಳಿಕ ಅವನು ೧೯೧೩ ರಲ್ಲಿ ನಾರ್‌ಮಲ್ ಶಾಲೆಗೆ ಸೇರಿ, ಅಲ್ಲಿ ಐದು ವರ್ಷಗಳ ಕಾಲ ವ್ಯಾಸಂಗ ಮಾಡಿದನು.

ನಾರ್‌ಮಲ್ ಶಾಲೆಯಲ್ಲಿ ಕೆಲವು ಕಾಲ ಅವನು ವಿದ್ಯಾರ್ಥಿ ಸಂಘದ ಒಬ್ಬ ಪದಾಧಿಕಾರಿಯಾಗಿದ್ದನು. ಒಂದು ವರ್ಷ ಅವನು ವಿದ್ಯಾರ್ಥಿ ಸಂಘದ ನಿರ್ದೇಶಕನೂ ಆಗಿದ್ದನು. ಆ ಶಾಲೆಯಲ್ಲಿ ಅವನ ಮೇಲೆ ತುಂಬ ಪ್ರಭಾವ ಬೀರಿದ ಅಧ್ಯಾಪಕರೆಂದರೆ ಯಾಂಗ್ ಚಾಂಗ್-ಚಿ. ಅವರು ಎಡಿನ್‌ಬರ್ಗ್ ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪದವಿ ಪಡೆದಿದ್ದರು. ಯುವಕರು ಒರಟಾಗಿರಬೇಕು, ಕಷ್ಟಸಹಿಷ್ಣುಗಳಾಗಿರಬೇಕು ಎಂಬ ನಿಷ್ಠೆಯನ್ನು ಈ ಅಧ್ಯಾಪಕರ ಆದರ್ಶದಿಂದ ಮಾವೋ ಬೆಳೆಸಿಕೊಂಡನು. ಅವನು ಪದವೀಧರನಾದುದು ೧೯೧೮ರ ಜೂನ್ ತಿಂಗಳಲ್ಲಿ.

## ೩. ಕ್ರಾಂತಿಯ ಪಥದಲ್ಲಿ

ಯಾಂಗ್ ಚಾಂಗ್-ಚಿ ಅವರಿಗೆ ಪೀಕಿಂಗ್ ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರ ಕೆಲಸ ದೊರಕಿದುದರಿಂದ, ಅವರು ಅಲ್ಲಿಗೆ ಹೊರಟು ಹೋದರು. ಅವರ ನೆರವಿನಿಂದ ಮಾವೋಗೆ ಪೀಕಿಂಗ್ ವಿಶ್ವವಿದ್ಯಾನಿಲಯದ ಪುಸ್ತಕ ಭಂಡಾರದಲ್ಲಿ ಒಂದು ಕೆಲಸ ದೊರಕಿತು. ಯಾಂಗ್ ಚಾಂಗ್-ಚಿ ಅವರ ಮಗಳು ಯಾಂಗ್ ಕೈ-ಹುಯ್ ಮಾವೋಗೆ ಪ್ರಿಯಳಾದಳು. ೧೯೨೦ ರಲ್ಲಿ ಚಾಂಗ್‌ಷಾದ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರ

ಕೆಲಸ ಮಾವೋಗೆ ಸಿಕ್ಕಿತು. ಸ್ವಲ್ಪ ಸಮಯದಲ್ಲಿಯೇ ಮಾವೋ ಯಾಂಗ್ ಕೈ–ಹುಯಿ ಕನ್ಯೆಯನ್ನು ವಿವಾಹವಾಗಿ ಚಾಂಗ್‌ಷಾದಲ್ಲಿ ನೆಲಸಿದನು.

ವಿವಾಹವಾದ ಕೆಲವು ದಿನಗಳಲ್ಲಿ ಮಾವೋ ಅವರ ದೃಷ್ಟಿ ಸಾಮ್ಯವಾದದ ಕಡೆಗೆ ಹರಿಯಿತು. ಮಾರ್ಕ್ಸ್ ವಿರಚಿತ 'ಕಮ್ಯುನಿಸ್ಟ್ ಮ್ಯಾನಿಫೆಸ್ಟೋ' ಓದಿದ ಬಳಿಕ ಅವರಿಗೆ ಕಮ್ಯುನಿಸ್ಟ್ ತತ್ತ್ವಗಳಲ್ಲಿ ನಿಷ್ಠೆ ಬೆಳೆಯಿತು. ೧೯೨೧ರಲ್ಲಿ ಅವರು ಯುವಜನರ ಸಂಘವನ್ನು ಚಾಂಗ್‌ಷಾದಲ್ಲಿ ಆರಂಭಿಸಿದರು. ೧೯೨೧ರ ಜುಲೈ ತಿಂಗಳಲ್ಲಿ ಚೀಣಾದ ಪ್ರಥಮ ರಾಷ್ಟ್ರೀಯ ಕಮ್ಯುನಿಸ್ಟ್ ಪಕ್ಷದ ಮಹಾಸಭೆ ಷಾಂಗೈನಲ್ಲಿ ನಡೆದಾಗ, ಚಾಂಗ್‌ಷಾದ ಪ್ರತಿನಿಧಿಯಾಗಿ ಮಾವೋ ಆ ಸಭೆಯಲ್ಲಿ ಭಾಗವಹಿಸಿದರು. ಅಲ್ಲಿಂದ ಹಿಂತಿರುಗಿದ ಬಳಿಕ ಮಾವೋ ಅವರ ದೃಷ್ಟಿ, ವಿಶೇಷವಾಗಿ ಕಮ್ಯುನಿಸ್ಟ್ ತತ್ತ್ವಗಳ ಪ್ರಚಾರ ಮತ್ತು ಕಾರ್ಮಿಕರ ಸಂಘಟನೆಯ ಕಡೆಗೆ ಹರಿಯಿತು. ಹುನಾನಿನಲ್ಲಿದ್ದ ಗವರ್ನರ್ ಚಾವೋ ಹೆಂಗ್–ತಿ ಅವರಿಗೆ ಮಾವೋ ಚಟುವಟಿಕೆಗಳು ಅಪ್ರಿಯವಾದವು. ಮಾವೋ ಅವರನ್ನು ದಸ್ತಗಿರಿ ಮಾಡಲು ಅವರ ಆಜ್ಞೆಯಾಯಿತು. ಅದರ ಸುಳಿವನ್ನು ತಿಳಿದ ಮಾವೋ ೧೯೨೩ರಲ್ಲಿ ಏಪ್ರಿಲ್ ತಿಂಗಳಲ್ಲಿ ಷಾಂಗೈಗೆ ಹೊರಟು ಹೋದರು. ೧೯೨೩ರ ಜೂನ್ ತಿಂಗಳಲ್ಲಿ ಕ್ಯಾಂಟನ್ನಿನಲ್ಲಿ ನಡೆದ ರಾಷ್ಟ್ರೀಯ ಕಮ್ಯುನಿಸ್ಟ್‌ಪಕ್ಷದ ಮೂರನೆಯ ಮಹಾಸಭೆಯಲ್ಲಿ ಅವರು ಭಾಗವಹಿಸಿ, ಕೇಂದ್ರ ಕಮ್ಯುನಿಸ್ಟ್ ಪಕ್ಷದ ಸದಸ್ಯರಾಗಿ ಆಯ್ಕೆಯಾಗಿ, ಪಕ್ಷದ ವ್ಯವಸ್ಥಾಪಕ ವಿಭಾಗದ ನಿರ್ದೇಶಕರಾದರು.

ಡಾ॥ ಸನ್‌ಯಾತ್ ಸೆನ್ ಅವರ ದೃಷ್ಟಿ ಸೋವಿಯೆತ್ ದೇಶದತ್ತ ಹರಿಯಿತು. ಲೆನಿನ್ ಅವರ ಆದೇಶದಂತೆ ಸನ್‌ಯಾತ್–

ಸೆನ್ ಅವರು ರಾಷ್ಟ್ರೀಯ ಪಕ್ಷ ಮತ್ತು ಕಮ್ಯುನಿಸ್ಟ್ ಪಕ್ಷಗಳನ್ನು ಒಟ್ಟಿಗೆ ಸೇರಿಸಿ, ಕೆಲಸ ಮಾಡಲು ಆರಂಭಿಸಿದರು. ಮಾವೋ ಕಮ್ಯುನಿಸ್ಟ್ ಪಕ್ಷದಲ್ಲಿದ್ದುಕೊಂಡು, ಡಾ॥ ಸನ್‌ಯಾತ್ ಸೆನ್‌ರ ರಾಷ್ಟ್ರೀಯ ಪಕ್ಷದೊಡನೆ ಕೆಲಸ ಮಾಡಲು ಆರಂಭಿಸಿದರು. ರಾಷ್ಟ್ರೀಯ ಪಕ್ಷಕ್ಕೆ 'ಕೋಮಿನ್‌ತಾಂಗ್' ಎಂಬ ಹೊಸ ಹೆಸರಾಯಿತು. ೧೯೨೪ರ ಡಿಸೆಂಬರ್ ತಿಂಗಳಲ್ಲಿ ಮಾವೋ ಅನಾರೋಗ್ಯದ ಕಾರಣವಾಗಿ, ತಮ್ಮ ಗ್ರಾಮವಾದ ಷಾವೋಷಾನ್ ಗ್ರಾಮಕ್ಕೆ ಹೋಗಿ, ಅಲ್ಲಿ ವಿಶ್ರಾಂತಿ ಪಡೆದರು. ೧೯೨೫ರ ಜನವರಿ ತಿಂಗಳಲ್ಲಿ ಷಾಂಗೈನಲ್ಲಿ ನಡೆದ ಕಮ್ಯುನಿಸ್ಟ್ ಪಕ್ಷದ ನಾಲ್ಕನೆಯ ಮಹಾಸಭೆಯಲ್ಲಿ ಅವರು ಭಾಗವಹಿಸಿದರು. ಮಾರ್ಚಿ ೧೨, ೧೯೨೫ರಲ್ಲಿ ಡಾ॥ ಸನ್‌ಯಾತ್ ಸೆನ್ ಅವರು ಕಾಲವಾದ ಬಳಿಕ ಜನರಲ್ ಚಿಯಾಂಗ್ ಕೈಷೆಕ್ ಅವರು ಕೋಮಿನ್‌ತಾಂಗ್ ಪಕ್ಷದ ಪ್ರಮುಖ ವ್ಯಕ್ತಿಯಾದರು.

ಶತಶತಮಾನಗಳ ಮೌಢ್ಯ, ಬಡತನ, ಅಜ್ಞಾನ, ಕುರುಡು ನಂಬಿಕೆ, ಅನಕ್ಷರತೆ, ಉತ್ಪತ್ತಿಯಲ್ಲಿ ಪ್ರಗತಿ ಇಲ್ಲದ, ಕ್ಷಾಮ ಹಾಗೂ ನದಿಗಳ ಪ್ರವಾಹಗಳಿಂದ ಹತಚೇತಸರಾದ ರೈತರ ಕಡೆಗೆ ಮಾವೋ ದೃಷ್ಟಿ ಹರಿಯಿತು. ೧೯೨೫ ರಿಂದ ೧೯೨೭ ರವರೆಗೆ ಅವರು ರೈತರ ಸಂಘಟನೆಗಾಗಿ ದುಡಿದರು, ಅದರ ಫಲವಾಗಿ ಅವರು ರಾಷ್ಟ್ರೀಯ ರೈತ ಸಂಘದ ಅಧ್ಯಕ್ಷರಾಗಿ ಆಯ್ಕೆಯಾದರು. ವಿದ್ಯೆ ಹಾಗೂ ವೈಜ್ಞಾನಿಕ ದೃಷ್ಟಿ ಗ್ರಾಮಗಳನ್ನು ಪ್ರವೇಶಿಸದಿದ್ದರೆ ರಾಷ್ಟ್ರದ ಉದ್ಧಾರ ಸಾಧ್ಯವಿಲ್ಲ ಎಂಬುದು ಅವರಿಗೆ ಸ್ಪಷ್ಟವಾಯಿತು. ಅತ್ತ ಕಾಲಕಳೆದಂತೆ ಚಿಯಾಂಗ್ ಕೈಷೆಕ್ ಅವರು ಕಮ್ಯುನಿಸ್ಟರನ್ನು ದ್ವೇಷಿಸತೊಡಗಿದರು. ಅವರು, ಸೈನ್ಯದ ಮೇಲೆ ತಮ್ಮ ಪ್ರಭುತ್ವವನ್ನು ಹೆಚ್ಚಿಸಿ, ಕ್ಯಾಂಟನ್, ನಾನ್‌ಕಿಂಗ್

ಮೊದಲಾದ ಪಟ್ಟಣಗಳನ್ನು ಆಕ್ರಮಿಸಿ ತಮ್ಮ ಸರ್ಕಾರದ ಬಲವನ್ನು ಹೆಚ್ಚು ಮಾಡಿಕೊಂಡರು. ಹುನಾನಿನಲ್ಲಿ ರೈತರ ಸಂಘಟನೆ ಮಾಡಿದ ಮಾವೋ ಅವರು ಹುನಾನಿನ ಗವರ್ನರ್ ಅವರಿಗೆ ಸರಿ ಬೀಳಲಿಲ್ಲ. ಮಾವೋ ಅವರ ಮೇಲೆ ಸೇಡಂ ತೀರಿಸಿಕೊಳ್ಳಲು ಹಿಂದಿನಿಂದಲೂ ಸಮಯ ಸಾಧಿಸುತ್ತಿದ್ದ ಅವರು, ಕಡೆಗೆ ಮಾವೋ ಅವರ ಪತ್ನಿಯಾದ ಯಾಂಗ್ ಕೈ–ಹುಯ್ ಅವರ ಸಾವಿಗೆ ಕಾರಣರಾದರು. ಇದರಿಂದ ವಿಚಲಿತರಾಗದೆ ಮಾವೋ ರೈತರ ಸಂಘಟನೆಯನ್ನು ತೀವ್ರಗೊಳಿಸುವುದರಲ್ಲಿಯೇ ಮಗ್ನರಾದರು. ಪ್ರಗತಿಶೀಲ ಯೋಜನೆಗಳಲ್ಲಿ ಆಸಕ್ತರಾದ ಚೂತೇ ಅವರು, ೧೯೨೮ರಲ್ಲಿ ಮಾವೋ ಅವರೊಡನೆ ಕ್ರಿಯಾಶೀಲರಾದರು. ಅವರಿಬ್ಬರಿಗೂ ಕ್ರಾಂತಿಯನ್ನು ಬಲಪಡಿಸುವ ಯೋಜನೆಯೇ ಮುಖ್ಯವಾಯಿತು.

ಕೋಮಿನ್‌ತಾಂಗ್ ಸೈನ್ಯ ಉತ್ತರದ ಕಡೆ ಧಾಳಿ ಮಾಡಿ ಪೀಕಿಂಗ್ ನಗರವನ್ನು ಕೈವಶಮಾಡಿಕೊಂಡಿತು. ಚಿಯಾಂಗ್ ಕೈಷೆಕ್ ಅವರಿಗೆ, ಕಮ್ಯೂನಿಸ್ಟರು ತಮ್ಮ ವಿರೋಧಿಗಳೆಂಬ ಭಾವನೆ ಬಂದು, ಅವರನ್ನು ನಾಶ ಮಾಡಲು ತಮ್ಮ ಸೈನ್ಯಕ್ಕೆ ಕರೆಕೊಟ್ಟರು. ಆಗ ಮಾವೋ ಮತ್ತು ಚೂತೇ ಕಿಯಾಂಗ್ಸಿಯ ಚಿನ್ ಕಾಂಗ ಷಾನ್ ಪರ್ವತ ಪ್ರದೇಶಗಳಿಗೆ ತಮ್ಮ ಅನುಯಾಯಿಗಳೊಂದಿಗೆ ಓಡಿಹೋಗಿ, ರಹಸ್ಯವಾಗಿ ಸೈನ್ಯ ಬಲವನ್ನು ವೃದ್ಧಿಪಡಿಸತೊಡಗಿದರು. ರಾಜಕೀಯಶಕ್ತಿ ಲಭ್ಯವಾಗುವುದು ಕ್ಷಾತ್ರಶಕ್ತಿಯಿಂದಲೇ ಎಂಬುದು ಮಾವೋಗೆ ಅರಿವಾಯಿತು. ಅಲ್ಲಿಯೇ ಅವರು ಗೆರಿಲ್ಲಾ ಕೆಂಪು ಸೇನೆಯನ್ನು ಕಟ್ಟಿದುದು. ಪ್ರಾರಂಭದಲ್ಲಿದ್ದ ಒಂದು ಸಾವಿರ ಸಂಖ್ಯೆಯ ಸೈನ್ಯ, ಕ್ರಮೇಣ ಬೆಳೆಯಿತು. ಮಾವೋ ಸೈನಿಕರಿಗೆ ಹೇಳಿದ ಪಾಠ ಹೀಗಿತ್ತು :

೧. ಶತ್ರುಗಳು ಅಪಾರ ಸಂಖ್ಯೆಯಲ್ಲಿದ್ದರೆ ಹಿಂತಿರುಗಿ.

೨. ಶತ್ರುಗಳು ಒಂದು ಕಡೆ ನೆಲಸಿದ್ದರೆ ಉಪದ್ರವಕೊಡಿ.

೩. ಶತ್ರುಗಳು ಬಳಲಿದಾಗ, ಅವರ ಮೇಲೆ ಬಿದ್ದು ಧಾಳಿ ಮಾಡಿ.

೪. ಶತ್ರುಗಳು ಓಡಿದಾಗ,ಅವರನ್ನು ಹಿಂಬಾಲಿಸಿ ನಾಶ ಮಾಡಿ.

ಸೈನ್ಯಕ್ಕೆ ವರ್ಷದಲ್ಲಿ ಹನ್ನೆರಡು ತಿಂಗಳೂ ಕೆಲಸ ಕೊಡುತ್ತಿದ್ದುದು ಮಾವೋ ಅವರ ಕರ್ತೃತ್ವ ಶಕ್ತಿಗೆ ಸಾಕ್ಷಿ. ಯುದ್ಧವಿಲ್ಲದಿದ್ದಾಗ ಹೊಲವನ್ನು ಉಳುವುದು, ಬೆಳೆ ಬೆಳೆಯುವುದು, ಧಾನ್ಯ ಸಂಗ್ರಹ ಮಾಡುವುದು, ಅಕ್ಕಪಕ್ಕದ ರೈತರಿಗೆ ಸಹಾಯ ಮಾಡುವುದು–ಇತ್ಯಾದಿ ಹಲವು ಕಾರ್ಯಗಳಲ್ಲಿ ಸೈನಿಕರು ನಿರತರಾಗುತ್ತಿದ್ದರು. ಚಿಯಾಂಗ್ ಕೈಷೆಕ್ ಕಮ್ಯುನಿಸ್ಟ್ ಸೈನ್ಯವನ್ನು ಸದೆಬಡೆಯುವ ನೀತಿಯನ್ನು ಬಿಟ್ಟಿರಲಿಲ್ಲ. ಶೀಲವಂತ ಧೀರ ಸೈನಿಕರಿದ್ದರೆ ಎಂಥ ಭಯಂಕರ ಶತ್ರುಸೈನ್ಯವನ್ನಾದರೂ ನಾಶಮಾಡಬಹುದೆಂಬ ಧೈರ್ಯ ಹಾಗೂ ನಂಬಿಕೆ ಮಾವೋ ಅವರದು. ತಮ್ಮ ಸೈನ್ಯದಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿ, ಸೈನ್ಯದ ಎಲ್ಲ ಸೈನಿಕರೂ ನೀತಿಸಂಹಿತೆಯನ್ನು ಅನುಸರಿಸುವಂತೆ ಮಾಡಿದ ಸಾಹಸಿ ಮಾವೋ. ಅವರ ಸೈನಿಕರಿಗೆ ಉಣ್ಣೆಯ ಬಟ್ಟೆಗಳಿರಲಿಲ್ಲ, ಆದರೂ ಅವರ ಸೈನಿಕರು ಭಯಂಕರ ಚಳಿಯಲ್ಲಿ ಯುದ್ಧ ಮಾಡಿದರು. ಅವರ ಸೈನಿಕರಿಗೆ ಸಾಕಷ್ಟು ಆಹಾರದ ಸರಬರಾಜಿರಲಿಲ್ಲ, ಆದರೂ ಅವರು ಧೃತಿಗೆಡಲಿಲ್ಲ. ಇದಕ್ಕೆ ಕಾರಣ ಮಾವೋ ಮತ್ತು ಚುತೇ ಅವರ ಮಾರ್ಗದರ್ಶನ ಮತ್ತು ಸೈನಿಕರ ಮೇಲಿದ್ದ ಅವರ ಅಪಾರ ಪ್ರೀತಿ. ಈ ಸೈನ್ಯ ಒಂದೊಂದು ಸಲ ಕೋಮಿನ್‌ತಾಂಗ್ ಸೈನ್ಯದ ಧಾಳಿಗೆ ಸಿಕ್ಕಿ ಅಪಾರ ಸಾವು ನೋವುಗಳನ್ನು ಅನುಭವಿಸುತ್ತಿತ್ತು. ಆದರೆ ಕಳೆದುಳಿದ ಸೈನ್ಯ ಪುನಃ

ಮಾವೋ ಅವರ ನೇತೃತ್ವದಲ್ಲಿ ಯುದ್ಧಕ್ಕೆ ಸಿದ್ಧವಾಗುತ್ತಿತ್ತು. ಮಾವೋ ಮತ್ತು ಚೂತೇ ಜೀವದ ಹಂಗುತೊರೆದು ಸೈನಿಕರೊಡನೆ ಹೆಗಲಿಗೆ ಹೆಗಲುಕೊಟ್ಟು ಶತ್ರುಗಳೊಡನೆ ಹೋರಾಡುತ್ತಿದ್ದರು. ಈ ನೈತಿಕ ಬಲವೇ ಮಾವೋ ಸೈನ್ಯದ ಶಕ್ತಿಯಾಗಿತ್ತು.

## ೪. ಗೆರಿಲ್ಲಾ ಪಡೆಯ ನಾಯಕ

ಮಾವೋ ಮತ್ತು ಚೂತೇ ಗೆರಿಲ್ಲಾ ಯುದ್ಧ ತಂತ್ರವನ್ನು ತಮ್ಮ ಸೈನ್ಯಕ್ಕೆ ಕಲಿಸಿದರು. ನೇರವಾಗಿ ಶತ್ರು ಸೈನ್ಯದೊಡನೆ ಹೋರಾಡುವುದು ಅಸಾಧ್ಯವೆಂದು ತಿಳಿದ ಅವರು ತಂತ್ರ ಹಾಗೂ ಯುಕ್ತಿಯಿಂದಲೆ ಶತ್ರುಸೈನ್ಯವನ್ನು ನಾಶ ಮಾಡುವ ವಿದ್ಯೆಯಲ್ಲಿ ತಮ್ಮ ಸೈನ್ಯ ಯಶಸ್ವಿಯಾಗುವಂತೆ ಮಾಡಿದರು. ೧೯೩೦ರಲ್ಲಿ ಒಂದು ಲಕ್ಷ ಸಂಖ್ಯೆಯ ಕೋಮಿನ್‌ತಾಂಗ್ ಸೈನ್ಯ ಮಾವೋ ಅವರ ಗೆರಿಲ್ಲಾ ಸೈನ್ಯವನ್ನು ಸುತ್ತು ಹಾಕಿದಾಗ, ಗೆರಿಲ್ಲಾ ತಂತ್ರದ ಮುಂದೆ ಆ ಸೈನ್ಯವು ಏನೂ ಮಾಡಲಾಗದೆ ಸೋತು, ಅಪಾರ ಸಾವು ನೋವುಗಳನ್ನು ಅನುಭವಿಸಿ. ಪಲಾಯನ ಮಾಡಿತು. ಈ ರೀತಿ ಮಾವೋ ಹೋರಾಟದಲ್ಲಿದ್ದಾಗಲೇ ಅವರು ೧೯೩೪ರಲ್ಲಿ ಹದಿನೆಂಟು ವರ್ಷದ ಹೋತ್ಸು–ಚೆನ್ ಎಂಬ ಕನ್ಯೆಯನ್ನು ಮದುವೆಯಾದರು. ಆ ಯುವತಿಗೆ ಕಮ್ಯುನಿಸ್ಟ್ ತತ್ತ್ವಗಳಲ್ಲಿ ಅಪಾರ ನಂಬಿಕೆ. ಪತಿಯನ್ನು ಬಹು ಪ್ರೀತಿಸಿ ಅವರಿಗೆ ಅಪಾರ ಸೇವೆ ಸಲ್ಲಿಸಿ, ಐದು ಮಕ್ಕಳನ್ನು ಅವರಿಂದ ಪಡೆದರು. ಸೈನ್ಯದ ಚಲನವಲನದಲ್ಲಿ ಅವರು ಭಾಗವಹಿಸಿದರು. ಬಾಣಂತಿಯಾಗಿ ಅವರಿಗೆ ವಿಶ್ರಾಂತಿ ಪಡೆಯಲೂ ಅವಕಾಶವಿರಲಿಲ್ಲ. ಕಡೆಗೆ ಮಕ್ಕಳನ್ನು ನೋಡಿಕೊಳ್ಳಲಾರದೆ ಹಳ್ಳಿಹಳ್ಳಿಯಲ್ಲಿ ರೈತರ ಮನೆಗಳಲ್ಲಿ ತಮ್ಮ ಮಕ್ಕಳನ್ನು ಬಿಡುವ ಪ್ರಸಂಗ ಅವರಿಗೆ ಬಂದಿತು. ಕಡೆಗೆ ಸೈನ್ಯದ

ಜೀವನದಿಂದ ನಿಶ್ಯಕ್ತರಾದರು. ಅವರನ್ನು ರಕ್ಷಿಸುವುದು ಮಾವೋಗೆ ಸಾಧ್ಯವಾಗದೆ ೧೯೩೭ರಲ್ಲಿ ಮಾವೋ ವಿವಾಹ ವಿಚ್ಛೇದನ ಮಾಡಿಕೊಂಡರು. ಕಡೆಗೆ ಆ ಮಹಿಳೆ ಶತ್ರುವಿನ ಬಾಂಬಿನ ಧಾಳಿಗೆ ಸಿಕ್ಕಿ ಸತ್ತು ಹೋದರು !

ಚೀಣಾದಲ್ಲಿ ಕೋಮಿನ್‌ತಾಂಗ್ ಮತ್ತು ಕಮ್ಯುನಿಸ್ಟ್ ಸೈನ್ಯಗಳಲ್ಲಿ ಹೋರಾಟ ನಡೆಯುತ್ತಿದ್ದುದನ್ನು ಕಂಡು ಜಪಾನ್ ೧೯೩೧ರಲ್ಲಿ ಚೀಣಾದ ಮೇಲೆ ಧಾಳಿಯನ್ನು ಆರಂಭಿಸಿತು. ಚಿಯಾಂಗ್ ಕೈಷೆಕ್, ಕಮ್ಯುನಿಸ್ಟರೇ ತಮ್ಮ ಪ್ರಬಲ ಶತ್ರುವೆಂದು ತಿಳಿದು, ಜಪಾನಿನೊಡನೆ ಸಂಧಿ ಮಾಡಿಕೊಂಡರು. ಕಮ್ಯುನಿಸ್ಟರು ಪ್ರಬಲರಾದರೆ, ತಮ್ಮ ಅಧಿಕಾರ ನಾಶವಾಗುವುದೆಂಬ ಹೆದರಿಕೆ ಅವರ ಮನಸ್ಸಿನಲ್ಲಿ ಬೇರೂರಿತ್ತು. ಜಪಾನಿಯರನ್ನು ತೃಪ್ತಿಪಡಿಸಲೆಂದು, ಚೀಣೀ ಪ್ರದೇಶದಲ್ಲಿ ಜಪಾನಿಯ ವಿರುದ್ಧವಾಗಿ ಚಳುವಳಿ ಮಾಡುವ ರಾಷ್ಟ್ರಭಕ್ತರನ್ನು ಸೆರೆಮನೆಗೆ ತಳ್ಳುವ ಹಾಗೂ ಕೊಲ್ಲಿಸುವ ಹೀನ ಕೃತ್ಯಕ್ಕೆ ಅವರು ಇಳಿದರು. ಮಾವೋ ಸೈನ್ಯವನ್ನು ನಾಶ ಮಾಡಲೆಂದು ಚಿಯಾಂಗ್ ಕೈಷೆಕ್ ಅವರು ಜರ್ಮನಿಯ ಸೇನಾತಜ್ಞರನ್ನು ಆಹ್ವಾನಿಸಿ ಹತ್ತು ಲಕ್ಷ ಸೈನ್ಯಕ್ಕೆ ಆಧುನಿಕ ರೀತಿಯಲ್ಲಿ ಶಿಕ್ಷಣವನ್ನಿತ್ತರು. ಆ ಬೃಹತ್ ಸೈನ್ಯ ಕಮ್ಯುನಿಸ್ಟ್ ಸೈನ್ಯವನ್ನು ಉಗ್ರರೀತಿಯಲ್ಲಿ ಸದೆಬಡಿಯಲು ಸಿದ್ಧವಾಯಿತು. ೧೯೩೪ರಲ್ಲಿ ಧಾಳಿಗೆ ಸುಸಜ್ಜಿತವಾಗಿ ನಿಂತ ಶತ್ರು ಸೈನ್ಯವನ್ನು ಎದುರಿಸಿ ಸಂಪೂರ್ಣವಾಗಿ ನಾಶವಾಗುವ ಬದಲು ಸುರಕ್ಷಿತವಾದ ಸ್ಥಳಕ್ಕೆ ಹೋಗಲು ಮಾವೋ ಯೋಚಿಸಿದರು. ತಮ್ಮ ಬಳಿ ಇದ್ದ ಒಂದು ಲಕ್ಷದ ಇಪ್ಪತ್ತು ಸಾವಿರ ಸೈನ್ಯದೊಡನೆ ಕಿಯಾಂಗ್ಸಿ ಪ್ರದೇಶದಿಂದ ಹೊರಟು ೩೬೮ ದಿನಗಳ ಸತತ ಪ್ರಯಾಣ ಮಾಡಿದರು. ಈ ಪ್ರಯಾಣದಲ್ಲಿ ಫ್ಯೂಕಿನ್, ಕಿಯಾಂಗ್ಸಿ, ಕ್ವಾಂಗ್‌ಟುಂಗ್, ಹ್ಯುನಾನ್,

ಕ್ಯಾಂಗ್ಸಿಕ್ವೀಟಾ, ಯುನಾನ್, ಸಿಕಾಂಗ್, ಬೇಜುವಾನ್, ಕಾನ್ಸು, ಷೆನ್ಸಿ–ಈ ಹತ್ತು ರಾಜ್ಯಗಳನ್ನೂ, ಹದಿನೆಂಟು ಪರ್ವತ ಪ್ರದೇಶಗಳನ್ನೂ, ಇಪ್ಪತ್ತನಾಲ್ಕು ನದಿಗಳನ್ನೂ ಅವರ ಸೈನ್ಯ ದಾಟಬೇಕಾಯಿತು. ಒಟ್ಟಿನಲ್ಲಿ ಅವರು ಹನ್ನೆರಡು ಸಾವಿರದ ಐನೂರು ಮೈಲಿಗಳ ಪ್ರಯಾಣಮಾಡಿ ಉತ್ತರ ಚೀಣಾದ ಷೆನ್ಸಿ ಪ್ರದೇಶವನ್ನು ಸೇರಿದರು. ಅವರ ಸೈನ್ಯದಲ್ಲಿ ಉಳಿದವರು ಕೇವಲ ಹತ್ತು ಸಾವಿರ ಮಾತ್ರ. ಉಳಿದವರು ಶತ್ರು ಸೈನ್ಯಕ್ಕೆ ಸಿಕ್ಕಿಯೋ, ರೋಗಕ್ಕೆ ಬಲಿಯಾಗಿಯೋ ಕಣ್ಮರೆಯಾದರು. ಮತ್ತೆ ಕೆಲವರು ನದಿಗಳನ್ನು ದಾಟುವಾಗ ನದಿಗಳ ಪಾಲಾದರು. ಈ ಮಹಾಪ್ರಯಾಣ ಒಂದು ದುರಂತ ಕತೆ. ಮಾವೋ ಅವರ ಸೈನ್ಯ ಪಟ್ಟಪಾಡು ವರ್ಣನಾತೀತ. ಬಿಸಿಲು, ಗಾಳಿ, ಮಳೆ, ಚಳಿ, ಆಹಾರದ ಅಭಾವ, ಶತ್ರುಗಳ ಪೀಡೆ—ನೂರಾರು ಕಷ್ಟಗಳನ್ನು ಸಹಿಸಿ, ಕಳೆದುಳಿದ ಸೈನ್ಯ ಪುನಃ ಯುದ್ಧಕ್ಕೆ ಸಿದ್ಧವಾಗಲು ತಮ್ಮ ಅಜೇಯವಾದ ಶಕ್ತಿ ಸಾಮರ್ಥ್ಯಗಳನ್ನು ರೂಪಿಸಲು ಮತ್ತೆ ಸಿದ್ಧತೆ ಮಾಡಿಕೊಂಡಿತು. ಮಾವೋ ಮತ್ತು ಚೂತೇ ತಮ್ಮ ಸೈನ್ಯದೊಡನೆ ಪ್ರಯಾಣ ಮಾಡಿದ ಹತ್ತು ರಾಜ್ಯಗಳಲ್ಲಿ ಕಮ್ಯೂನಿಸ್ಟ್ ತತ್ತ್ವಗಳನ್ನು ಪ್ರಚಾರ ಮಾಡಿದರು. ಅವರು ಬಿತ್ತಿದ ಈ ಬಿತ್ತನೆ ಮುಂದೆ ಉತ್ತಮ ಫಲಗಳನ್ನು ಕೊಡುವಂತಾಯಿತು.

೧೯೩೫ರಲ್ಲಿ ತ್ಸುನ್ಯಿ ಎಂಬ ಪಟ್ಟಣದಲ್ಲಿ ಸೇರಿದ ಕಮ್ಯೂನಿಸ್ಟ್ ಪಕ್ಷದ ಸಭೆ ಮಾವೋ ತ್ಸೆ–ತುಂಗರನ್ನು ಪಕ್ಷದ ಅಧ್ಯಕ್ಷರನ್ನಾಗಿ ಚುನಾಯಿಸಿತು. ಅಂದಿನಿಂದ ೧೯೭೬ರಲ್ಲಿ ಅವರು ಶರೀರವನ್ನು ತ್ಯಜಿಸುವವರೆಗೆ ಅಧ್ಯಕ್ಷರಾಗಿ ಮುಂದುವರಿದರು. ಷೆನ್ಸಿ ಪ್ರದೇಶದ ಯೆನಾನಿಯಲ್ಲಿ ಮಾವೋ ನೆಲಸಿ ತಮ್ಮ ಸೈನ್ಯ ಬಲವನ್ನು ಹೆಚ್ಚು ಪಡಿಸಲು ಸರ್ವಪ್ರಯತ್ನ ಮಾಡಿದರು. ಷೆನ್ಸಿ ಪ್ರದೇಶದ ರೈತರು

ಕ್ರಮೇಣ ಮಾವೋ ಅವರ ಸೈನ್ಯಕ್ಕೆ ಸೇರಲು ಆರಂಭಿಸಿದರು. "ಚೀಣೀಯರು ಒಗ್ಗಟ್ಟಾಗಿ ವಿದೇಶಿ ಸಾಮ್ರಾಜ್ಯವಾದಿಗಳನ್ನು ಹೊರದೂಡಬೇಕು. ಚೀಣೀಯರು ತಮ್ಮ ತಮ್ಮಲ್ಲೇ ಹೋರಾಡಿ ದುರ್ಬಲರಾಗಬಾರದು" ಎಂಬ ಮಾವೋ ಘೋಷಣೆ ಜನರ ಮನಸ್ಸನ್ನು ಆಕರ್ಷಿಸಿತು. ಕ್ರಮೇಣ ಚಿಯಾಂಗ್ ಕೈಷೆಕ್ ಅವರು ಜಪಾನಿನ ದುರಾಕ್ರಮಣವನ್ನು ಎದುರಿಸದೆ, ಕಮ್ಯುನಿಸ್ಟರನ್ನು ಧ್ವಂಸ ಮಾಡುವ ನೀತಿ, ಚೀಣಾ ದೇಶದ ಜನಸಾಮಾನ್ಯರಿಗೆ ಹಿಡಿಸಲಿಲ್ಲ. ದಿನಗಳು ಉರುಳಿದಂತೆ ಮಾವೋ ಜನಪ್ರಿಯವಾಗುತ್ತ ಬಂದರು. ಮಾವೋ ತಮ್ಮ ಸೈನ್ಯಕ್ಕೆ ಒಟ್ಟಿಗೆ ಹನ್ನೊಂದು ನಿಯಮಗಳ ಶೀಲ ಸಂಹಿತೆಯನ್ನು ರೂಪಿಸಿದರು. ಅವುಗಳಲ್ಲಿ ಮೂರು ವಿಶೇಷ ನಿಯಮಗಳು. ಉಳಿದ ಎಂಟು ಎಚ್ಚರದ ಸಾಮಾನ್ಯ ನಿಯಮಗಳು. ಅವುಗಳು ಹೀಗಿದ್ದವು:

(ಅ) ಮೂರು ವಿಶೇಷ ನಿಯಮಗಳು:

೧. ನಾಯಕರಲ್ಲಿ ಪೂರ್ಣ ವಿಧೇಯತೆ

೨. ರೈತರ ಆಸ್ತಿಗೆ ಯಾವ ವಿಧವಾದ ಹಾನಿಯಾಗದಂತೆ ನೋಡಿಕೊಳ್ಳುವುದು.

೩. ಶ್ರೀಮಂತರಿಂದ ವಶಪಡಿಸಿಕೊಂಡ ವಸ್ತುಗಳ ಪೂರ್ಣ ವಿವರಗಳನ್ನು ನಾಯಕರಿಗೆ ಒಪ್ಪಿಸುವುದು.

(ಆ) ಎಚ್ಚರದ ಎಂಟು ಸಾಮಾನ್ಯ ನಿಯಮಗಳು:

೧. ಸೈನಿಕರಿಗೆ ಹಳ್ಳಿಯಲ್ಲಿ ವಸತಿಗಳನ್ನು ಕೊಟ್ಟಾಗ, ಬಿಟ್ಟು ಹೋಗುವಾಗ ಎಲ್ಲವನ್ನೂ ಶುಚಿಗೊಳಿಸಿ, ಕಿಟಕಿ ಬಾಗಿಲು ಗಳನ್ನು ಮುಚ್ಚಿ ಹೋಗತಕ್ಕದ್ದು.

೨. ನಿದ್ದೆಯಾದ ಬಳಿಕ, ಹಾಸನ್ನು ಮಡಿಸಿ ಪಡೆದವರಿಗೆ ಹಿಂತಿರುಗಿಸತಕ್ಕದ್ದು.

೩. ಜನರೊಡನೆ ವಿನಯ ಹಾಗೂ ಗೌರವದಿಂದ ನಡೆದುಕೊಂಡು ಸಾಧ್ಯವಾದಾಗ ಅವರಿಗೆ ನೆರವು ನೀಡತಕ್ಕದ್ದು.

೪. ಹಳ್ಳಿಯ ಜನರಿಂದ ಪಡೆದ ವಸ್ತುಗಳನ್ನು ಹಿಂತಿರುಗಿಸ ತಕ್ಕದ್ದು.

೫. ಯುದ್ಧದ ಸಂದರ್ಭದಲ್ಲಿ ಆದ ನಷ್ಟಗಳನ್ನು ತುಂಬಿಕೊಡ ತಕ್ಕದ್ದು.

೬. ರೈತರಲ್ಲಿ ಪ್ರಾಮಾಣಿಕವಾಗಿ ನಡೆದುಕೊಳ್ಳತಕ್ಕದ್ದು.

೭. ಇತರರಿಂದ ಪಡೆದ ವಸ್ತುಗಳ ಮೊಬಲಗನ್ನು ಸಲ್ಲಿಸತಕ್ಕದ್ದು

೮. ಸೈನಿಕರು ಹಳ್ಳಿಯಲ್ಲಿ ನೆಲಸಿದಾಗ, ಹಳ್ಳಿಗೆ ದೂರದಲ್ಲಿ ಕಕ್ಕಸ್ಸನ್ನು ನಿರ್ಮಿಸಿ, ಹಳ್ಳಿಯ ನೈರ್ಮಲ್ಯವನ್ನು ರಕ್ಷಿಸ ತಕ್ಕದ್ದು.

ಕಮ್ಯುನಿಸ್ಟ್ ಸೈನ್ಯ ಈ ಶೀಲ ಸಂಹಿತೆಯನ್ನು ಕಟ್ಟುನಿಟ್ಟಾಗಿ ಅನುಸರಿಸಿದುದರಿಂದ, ಸೈನಿಕರು ಜನಪ್ರಿಯರಾದರು. ಅವರ ಪ್ರಭಾವ ಜನತೆಯ ಮೇಲಾದುದರ ಜೊತೆಗೆ ಕಮ್ಯುನಿಸ್ಟರು ಗೌರವಕ್ಕೆ ಪಾತ್ರರಾದರು.

"ವಿದೇಶಿ ಸಾಮ್ರಾಜ್ಯವಾದಿಗಳನ್ನು ಹೊರದೂಡಬೇಕು. ಚೀಣೀ ಯರು ತಮ್ಮತಮ್ಮಲ್ಲೆ ಹೋರಾಡಬಾರದು" ಎಂಬ ಮಾವೋ ಘೋಷಣೆ ಉತ್ತರ ಚೀಣಾದಲ್ಲಿದ್ದ ಕೋಮಿನ್‌ತಾಂಗ್ ಸೈನ್ಯಕ್ಕೂ ಪ್ರಿಯವಾಯಿತು. ಚಿಯಾಂಗ್ ಕೈಷೆಕ್ ಅವರು ಮಾವೋ ತಲೆ ಯನ್ನು ಕತ್ತರಿಸಿ ತಂದು ಒಪ್ಪಿಸುವವರಿಗೆ ೨,೫೦.೦೦೦ ಬೆಳ್ಳಿಯ ಡಾಲರಿನ ಬಹುಮಾನವನ್ನು ಘೋಷಿಸಿದ್ದರು. ಕೋಮಿನ್‌ತಾಂಗ್

ಸೈನ್ಯ ಕಮ್ಯುನಿಸ್ಟ್ ಸೈನ್ಯದೊಡನೆ ಹೋರಾಡಲು ಇಚ್ಛಿಸಲಿಲ್ಲ. ಈ ವಾರ್ತೆಯನ್ನು ಕೇಳಿ ಚಿಯಾಂಗ್ ಕೈಷೆಕ್ ನಾನ್‌ಕಿಂಗ್‌ನಿಂದ ಹೊರಟು ನೇರವಾಗಿ ಷೆನ್ಸಿ ಪ್ರದೇಶದ ಸಿಯಾನಿಗೆ ಹೋಗಿ ತಮ್ಮ ಸೈನ್ಯದ ಅಧಿಕಾರಿಗಳೊಡನೆ ಮಾತನಾಡಿದರು. ಅಲ್ಲಿ ಅವರಿಗೆ ಆಶ್ಚರ್ಯ ಕಾದಿತ್ತು. ಅವರ ೧,೭೦,೦೦೦ ಸೈನ್ಯವು ಕಮ್ಯುನಿಸ್ಟರ ಮೇಲೆ ಹೋರಾಡುವುದನ್ನು ನಿಲ್ಲಿಸಿ, ದುರಾಕ್ರಮಣಕಾರಿಗಳಾದ ಜಪಾನಿಯರ ಮೇಲೆ ಯುದ್ಧ ಮಾಡುವ ತೀರ್ಮಾನವನ್ನು ಚಿಯಾಂಗರಿಗೆ ತಿಳಿಸಿದರು. ಅವರ ಆದೇಶಕ್ಕೆ ಅಲ್ಲಿ ಪುರಸ್ಕಾರ ಸಿಗಲಿಲ್ಲ. ತಮ್ಮ ಸೈನ್ಯದ ಮಧ್ಯೆ ತಾವೇ ಸೆರೆಸಿಕ್ಕಿದಂತಾಗಿ ತೇಜೋ ಭಂಗವಾಯಿತು. ಸೈನ್ಯಾಧಿಕಾರಿಗಳು ರಾಷ್ಟ್ರದ ಐಕ್ಯತೆ ಹಾಗೂ ಜಪಾನಿ ಆಕ್ರಮಣದ ತೆರವು ಎಂಬ ತಮ್ಮ ತೀರ್ಮಾನಗಳನ್ನು ಚಿಯಾಂಗರ ಮುಂದಿಟ್ಟರು. ಈ ವಾರ್ತೆ ರಾಜಧಾನಿಯಾದ ನಾನ್ ಕಿಂಗಿಗೆ ಮುಟ್ಟಿ, ಅಲ್ಲಿಂದ ಸೈನ್ಯಾಧಿಕಾರಿಗಳು ದೊಡ್ಡ ಸೈನ್ಯದೊಡನೆ ಧಾವಿಸಿ ಬಂದರು. ಕೋಮಿನ್‌ತಾಂಗ್ ಸೈನಿಕರು ಚಿಯಾಂಗರನ್ನು ಕೊಲ್ಲಲು ಯೋಚಿಸಲಿಲ್ಲ. ತಮ್ಮ ಧ್ಯೇಯಗಳನ್ನು ಮಾತ್ರ ಅವರ ಮುಂದಿಟ್ಟರು. ಆ ಸಂದರ್ಭದಲ್ಲಿ ಮಾವೋ ನೇತೃತ್ವದಲ್ಲಿ ಮಾತು ಕತೆ ನಡೆದು ಚಿಯಾಂಗರು ನಾನ್‌ಕಿಂಗಿಗೆ ಹಿಂತಿರುಗುವಂತಾಯಿತು. ಮಾವೋ ಮನಸ್ಸು ಮಾಡಿದ್ದರೆ ಚಿಯಾಂಗರನ್ನು ಕತ್ತರಿಸಿ ಎಸೆಯ ಬಹುದಿತ್ತು ! ಮಾವೋ ಅವರ ಪ್ರಭಾವ ಕೋಮಿನ್‌ತಾಂಗ್ ಸೈನ್ಯದ ಮೇಲೆ ಮತ್ತಷ್ಟು ಹೆಚ್ಚಾಯಿತು. ಅವರ ಘನತೆ ಗೌರವ ಹೆಚ್ಚಾಯಿತು. ಡಿಸೆಂಬರ್ ೨೫, ೧೯೩೬ರಂದು ಚಿಯಾಂಗ್ ನಾನ್‌ಕಿಂಗಿಗೆ ಹಿಂತಿರುಗಿದರು. ಅವರು ಬಾಹ್ಯದಲ್ಲಿ ಕಮ್ಯುನಿಸ್ಟ ರೊಡನೆ ಸಂಧಿ ಮಾಡಿಕೊಳ್ಳಲು ಒಪ್ಪಿದರೂ ಅವರ ಹೃದಯಾಂತ ರಾಳದಲ್ಲಿ ಕ್ರೋಧಾಗ್ನಿ ಉರಿದೆದ್ದಿತು. ಜಪಾನಿಯರನ್ನು

ಚರ್ಮರೋಗಕ್ಕೂ, ಕಮ್ಯುನಿಸ್ಟರನ್ನು ಹೃದಯರೋಗಕ್ಕೂ ಅವರು ಹೋಲಿಸಿದರು.

೧೯೩೭ರಲ್ಲಿ ಜಪಾನಿಯರು ತಮ್ಮ ಧಾಳಿಯನ್ನು ಚೀಣಾದ ಮೇಲೆ ಮತ್ತಷ್ಟು ತೀವ್ರಗೊಳಿಸಿದರು. ಯೆನಾನಿನಲ್ಲಿ ನೆಲಸಿದ ಮಾವೋ ತಮ್ಮ ಸೈನ್ಯದ ಸಂಘಟನೆ ಹಾಗೂ ತಾವು ಆಕ್ರಮಿಸಿ ಕೊಂಡಿದ್ದ ಪ್ರದೇಶಗಳ ಆಡಳಿತವನ್ನು ವ್ಯವಸ್ಥೆಗೊಳಿಸಿದರು. ಇದೇ ಸಮಯದಲ್ಲಿ ಅವರು ಚಿಯಾಂಗ್ ಚಿಂಗ್ ಎಂಬ ಮಹಿಳೆಯನ್ನು ವಿವಾಹವಾದರು. 'ಚೀಣಾದ ಕ್ರಾಂತಿ ಮತ್ತು ಚೀಣಾದ ಕಮ್ಯುನಿಸ್ಟ್ ಪಕ್ಷ' ಎಂಬ ಅವರ ಪುಸ್ತಕ ೧೯೩೯ರಲ್ಲಿ ಪ್ರಕಟವಾಯಿತು. 'ನವ ಪ್ರಜಾಪ್ರಭುತ್ವ' ಎಂಬ ಅವರ ಇನ್ನೊಂದು ಪುಸ್ತಕ ಪ್ರಕಟ ವಾದುದು ೧೯೪೦ರಲ್ಲಿ. ಸೈನ್ಯದ ಕಾರ್ಯಾಚರಣೆಯಲ್ಲಿ ತೊಡಗಿ ದ್ದರೂ ಮಾವೋ ಅಧ್ಯಯನ ಮತ್ತು ಬರವಣಿಗೆಗಾಗಿ ವಿಶೇಷ ಗಮನವಿತ್ತರು. ಯೆನಾನಿನ ಪ್ರದೇಶದಲ್ಲಿ ಸರ್ಕಾರವನ್ನು ನಡೆಸು ತ್ತಿದ್ದರೂ ಯಾವ ಆಡಂಬರಕ್ಕೂ ಅವರ ಜೀವನದಲ್ಲಿ ಅವಕಾಶ ವಿರಲಿಲ್ಲ. ಮೊದಲು ಯೆನಾನಿಗೆ ಬಂದಾಗ ವಾಸಿಸುತ್ತಿದ್ದ ಗುಹೆ ಯಲ್ಲಿಯೇ ಈಗಲೂ ಅವರು ವಾಸಿಸುತ್ತಿದ್ದರು. ತಮ್ಮ ಸೈನ್ಯ ಆಕ್ರಮಿಸಿದ ಪ್ರದೇಶದಲ್ಲಿ ವಾಸಿಸುತ್ತಿದ್ದ ಹತ್ತು ಲಕ್ಷ ಜನರ ಕ್ಷೇಮಚಿಂತನೆಯಲ್ಲಿ ಅವರು ಮಗ್ನರಾಗಿದ್ದರು. ತಮ್ಮ ಸೈನ್ಯವನ್ನು ಹಳ್ಳಿಯ ಜನರ ಬೇಸಾಯದ ಕೆಲಸಕ್ಕೆ ಆಗಾಗ ಕಳುಹಿಸಿ, ಹಳ್ಳಿಯ ಜನರ ಉತ್ಪತ್ತಿ ಹೆಚ್ಚಾಗುವಂತೆ ಮಾಡಿದರು. ವರ್ಷದಲ್ಲಿ ಮೂರು ತಿಂಗಳ ಕಾಲ ಮಾವೋ ಸೈನ್ಯ ಹೊಲಗಳಲ್ಲಿ ಕೆಲಸ ಮಾಡುತ್ತಿತ್ತು. ಸೈನಿಕರು ಸ್ವಾವಲಂಬಿಗಳಾಗಲು ಈ ಯೋಜನೆ ಯಿಂದ ಪ್ರಯೋಜನವಾಯಿತು. ಸೈನಿಕರಲ್ಲಿ ಆತ್ಮವಿಶ್ವಾಸ ಮೂಡಿತು. ಅವರು ರಾಷ್ಟ್ರಕ್ಕೆ ಹೊರೆಯಾಗಲಿಲ್ಲ. ರಾಷ್ಟ್ರೀಯ ಉತ್ಪಾದನಾ ಕಾರ್ಯದಲ್ಲಿ ಸೈನಿಕ ಶಕ್ತಿಯನ್ನು ಬಳಸಿದಂತಾಯಿತು.

ಜಪಾನಿಯರು ಚೀಣಾದ ಪ್ರದೇಶಗಳ ಮೇಲೆ ಧಾಳಿಮಾಡಿದಾಗಲೆಲ್ಲ ಸಾರ್ವತ್ರಿಕ ಕೊಲೆ, ಸುಲಿಗೆ,ಮನೆಗಳನ್ನು ಸುಡುವುದು–ಇಂತಹ ಹೀನಕೃತ್ಯಗಳಲ್ಲಿ ತೊಡಗುತ್ತಿದ್ದರು. ಈ ಕಾರಣದಿಂದ ಚೀಣೀಯರು ಜಪಾನಿಯರನ್ನು ದ್ವೇಷಿಸತೊಡಗಿದರು. ಮಾವೋ ಅವರ ಕಮ್ಯುನಿಸ್ಟ್ ಸೈನ್ಯ ಜಪಾನಿಯರನ್ನು ತಮ್ಮ ದೇಶದಿಂದ ಓಡಿಸಲು ನಡೆಸುತ್ತಿದ್ದ ಕಾರ್ಯಾಚರಣೆ ಚೀಣೀಯರಿಗೆ ಪ್ರಿಯವಾಯಿತು. ಕಮ್ಯುನಿಸ್ಟ್ ಸೈನ್ಯದ ಶೀಲಸಂಹಿತೆ, ಚೀಣೀ ಜನತೆಯಲ್ಲಿ ಆದರ ಗೌರವಗಳನ್ನು ಮೂಡಿಸಲು ಕಾರಣವಾಯಿತು. ಅದೇ ಸಮಯದಲ್ಲಿ, "ಜನತೆಯ ವಿಶ್ವಾಸವನ್ನು ಪಡೆದ ಕಮ್ಯುನಿಸ್ಟ್ ಸೈನ್ಯಕ್ಕೆ ಕಡೆಯಲ್ಲಿ ಜಯ, ಎಂಥ ಪ್ರಬಲ ಶತ್ರುವನ್ನಾದರೂ ಈ ಸೈನ್ಯ ನಾಶ ಮಾಡುತ್ತದೆ" ಎಂದು ಮಾವೋ ಘೋಷಿಸಿದರು. ನವಚೀಣಾವನ್ನು ರೂಪಿಸುವ ಸಂಕಲ್ಪ ಅವರದಾಯಿತು.

೧೯೪೫ರಲ್ಲಿ ಕಮ್ಯುನಿಸ್ಟ್ ಪಕ್ಷದ ಮಹಾಸಭೆ ಸೇರಿತು. ಕಮ್ಯುನಿಸ್ಟ್ ಪಕ್ಷದ ಸದಸ್ಯರ ಸಂಖ್ಯೆ ೧೨,೧೦,೦೦೦ ಇತ್ತು. ಕಮ್ಯುನಿಸ್ಟ್ ಸೈನ್ಯದಲ್ಲಿ ಒಂಬತ್ತುಲಕ್ಷ ಸೈನಿಕರಿದ್ದರು. ವಿದೇಶಿಯರು ಚಿಯಾಂಗ್ ಕೈಷೆಕ್‌ರನ್ನೇ ಚೀಣಾದ ನಾಯಕರೆಂದು ಗೌರವಿಸಿದ್ದರೂ ಮಾವೋ ಚೀಣಾದ ಗಣನೀಯ ಪ್ರದೇಶಗಳನ್ನು ಕೈವಶ ಮಾಡಿಕೊಂಡು, ಅವುಗಳಲ್ಲಿ ಉತ್ತಮ ಆಡಳಿತ ವ್ಯವಸ್ಥೆಯನ್ನು ರೂಪಿಸಿ, ಜನಪ್ರಿಯರಾದರು. ಕೋಮಿನ್‌ತಾಂಗ್ ಸೈನಿಕರನ್ನು ಸೆರೆಹಿಡಿದಾಗ, ಅವರನ್ನು ಮಾವೋ ಶಿಕ್ಷಿಸುತ್ತಿರಲಿಲ್ಲ ಅವರಿಗೆ ಕಮ್ಯುನಿಸ್ಟ್ ತತ್ತ್ವಗಳನ್ನು ಬೋಧಿಸಿ, ಅವರನ್ನು ರಾಷ್ಟ್ರಭಕ್ತ ಸೈನಿಕರನ್ನಾಗಿ ಪರಿವರ್ತಿಸಿ, ತಮ್ಮ ಸೈನ್ಯಕ್ಕೇ ಸೇರಿಸಿಕೊಳ್ಳುತ್ತಿದ್ದರು.

೧೯೪೫ರ ಆಗಸ್ಟ್ ತಿಂಗಳಲ್ಲಿ ಅಮೆರಿಕ ಜಪಾನಿನ ಹಿರೋಷಿಮ ಮತ್ತು ನಾಗಸಾಕಿಗಳ ಮೇಲೆ ಅಣುಬಾಂಬುಗಳನ್ನು ಸಿಡಿಸಿದ ಪರಿಣಾಮವಾಗಿ, ಚೀಣಾದ ಮೇಲಣ ಜಪಾನಿ ಆಕ್ರಮಣ ನಿಂತು ಹೋಯಿತು. ಜಪಾನ್ ತೆರವು ಮಾಡಿದ ಉತ್ತರ ಚೀಣಾದ ಭಾಗಗಳನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಲು ಮಾವೋ ತಮ್ಮ ಸೈನ್ಯಕ್ಕೆ ಆದೇಶ ನೀಡಿದರು. ಅದೇ ಸಮಯದಲ್ಲಿ ಚಿಯಾಂಗರೂ ಆ ಪ್ರದೇಶಗಳನ್ನು ಆಕ್ರಮಿಸಲು ತಮ್ಮ ಸೈನ್ಯಕ್ಕೆ ಆದೇಶ ನೀಡಿದರು. ಆಗ ಎರಡು ಸೈನ್ಯಗಳಿಗೂ ಘರ್ಷಣೆ ಆರಂಭವಾಯಿತು. ಕಮ್ಯುನಿಸ್ಟ್ ಮತ್ತು ಕೋಮಿನ್‌ತಾಂಗ್–ಈ ಎರಡು ಪಕ್ಷಗಳೂ ಸೇರಿ ಸಮ್ಮಿಶ್ರ ಸರ್ಕಾರವನ್ನು ರೂಪಿಸಲು ಅಮೆರಿಕ ಸಲಹೆ ಮಾಡಿತು. ಸುಸಜ್ಜಿತವಾದ ಕೋಮಿನ್‌ತಾಂಗ್ ಸೈನ್ಯದ ಮುಂದೆ ಕಮ್ಯುನಿಸ್ಟ್ ಸೈನ್ಯ ಹೋರಾಡಲು ಅಸಮರ್ಥವೆಂದು ತಿಳಿದು, ಸೋವಿಯೆತ್ ದೇಶದಿಂದ ಸ್ಟಾಲಿನರೂ ಅದೇ ಅಭಿಪ್ರಾಯಕ್ಕೆ ಬೆಂಬಲವಿತ್ತರು. ಹಲವು ವರ್ಷಗಳ ಸತತ ಪ್ರಯತ್ನಗಳಿಂದ ಮಾವೋ ವ್ಯವಸ್ಥಿತ ಸೈನ್ಯವನ್ನು ನಿರ್ಮಿಸಿದ ಸತ್ಯ ಸಂಗತಿ ಯಾರಿಗೂ ತಿಳಿದಿರಲಿಲ್ಲ. ಚೀಣಾದಲ್ಲಿದ್ದ ಅಮೆರಿಕದ ರಾಯಭಾರಿ ಹರ್ಲಿ ಅವರು ಯೆನಾನಿಗೆ ಹೋಗಿ, ಮಾವೋ ಅವರನ್ನು ಚುಂಕಿಂಗಿನಲ್ಲಿದ್ದ ಚಿಯಾಂಗರ ಬಳಿಗೆ ವಿಮಾನದಲ್ಲಿ ಕರೆದುಕೊಂಡು ಹೋದರು. ಇಬ್ಬರಿಗೂ ೧೯೪೫ರ ಆಗಸ್ಟ್ ೨೮ರಿಂದ ಅಕ್ಟೋಬರ್ ೧೦ರ ವರೆಗೆ ಮಾತುಕತೆ ನಡೆದು, ಕಡೆಗೆ ವಿಫಲವಾಯಿತು. ಮಾವೋ ಯೆನಾನಿಗೆ ಹಿಂತಿರುಗಿದರು.

## ೫. ಕಡೆಯ ಹೋರಾಟ

ಮಾವೋ ಹಿಂತಿರುಗಿದ ಬಳಿಕ, ಚಿಯಾಂಗರು ಅಮೆರಿಕದಿಂದ ಪಡೆದ ವಿಮಾನಬಲ, ಟ್ಯಾಂಕುಗಳು ಹಾಗೂ ಆಧುನಿಕ ಶಸ್ತ್ರಾಸ್ತ್ರ

ಗಳಿಂದ ಸುಸಜ್ಜಿತವಾದ ಸೈನ್ಯವನ್ನು ಕಮ್ಯುನಿಸ್ಟ್ ಸೈನ್ಯವನ್ನು ನಾಶಪಡಿಸುವುದಕ್ಕಾಗಿ ಯೆನಾನಿಗೆ ಕಳುಹಿಸಿದರು. ಅವರ ದೃಷ್ಟಿ ಕಮ್ಯುನಿಸ್ಟರ ನೆಲೆಯಾದ ಯೆನಾನನ್ನು ಧ್ವಂಸಮಾಡಿ, ಕಮ್ಯುನಿಸ್ಟ್ ಸೈನ್ಯವನ್ನು ಸೋಲಿಸಬೇಕೆಂಬುದರಲ್ಲಿ ಏಕಾಗ್ರವಾಗಿತ್ತು. ಆ ಸುಸಜ್ಜಿತ ಸೈನ್ಯದ ಮುಂದೆ ಯುದ್ಧ ಮಾಡುವುದು ಅಸಾಧ್ಯವೆಂದು ತಿಳಿದ ಮಾವೋ, ತಮ್ಮ ಸೈನ್ಯವನ್ನು ಯೆನಾನಿನ ಉತ್ತರದ ಕಡೆ ಧಾಳಿ ಮಾಡುವಂತೆ ಮಾಡಿದರು. ಅವರ ಸೈನ್ಯಕ್ಕೆ ಮಂಚೂರಿಯಾದ ಪ್ರದೇಶದಲ್ಲಿ ಪ್ರಚಂಡ ಜಯ ಲಭಿಸಿತು. ಏಪ್ರಿಲ್ ೧೪, ೧೯೪೭ ರಂದು ಕಮ್ಯುನಿಸ್ಟ್ ಸೇನೆ ಮಂಚೂರಿಯಾದ ಚಾಂಗ್‌ಚುನ್ ನಗರವನ್ನು ಕೈವಶ ಮಾಡಿಕೊಂಡಿತು. ಕ್ರಮೇಣ ಇತರ ನಗರಗಳೂ ಅವರ ಸ್ವಾಧೀನವಾದುವು. ಈ ವಿಜಯಗಳಿಂದ ಬಲಶಾಲಿಗಳಾದ ಮಾವೋ ೧೯೪೮ರ ಸೆಪ್ಟೆಂಬರ್ ೨೪ರಂದು ಕೋಮಿನ್‌ತಾಂಗ್ ಸೈನ್ಯದ ನೆಲೆಯಾದ ತ್ಸಿನಾನ್ ನಗರದ ಮೇಲೆ ಆಕ್ರಮಣ ಮಾಡಿ, ಆ ನಗರವನ್ನು ತಮ್ಮ ಕೈವಶ ಮಾಡಿಕೊಂಡರು. ಅಪಾರ ಮದ್ದು ಗುಂಡುಗಳೂ ಶಸ್ತ್ರಾಸ್ತ್ರಗಳೂ ಕಮ್ಯುನಿಸ್ಟ್ ಸೇನೆಗೆ ದೊರಕಿ, ಅವರ ಶಕ್ತಿ ಅಜೇಯವಾಯಿತು. ೧೯೪೮ರ ಅಕ್ಟೋಬರ್ ಮತ್ತು ನವೆಂಬರ್ ತಿಂಗಳಲ್ಲಿ ಭಯಂಕರ ಯುದ್ಧವು ನಡೆದು, ಆಯಕಟ್ಟಿನ ನಗರವಾದ ಹ್ಸುಚೋ ಕಮ್ಯುನಿಸ್ಟ್ ಸೇನೆಯ ವಶವಾಯಿತು. ಆ ನಗರದ ಆಕ್ರಮಣವಾದ ಬಳಿಕ ಮಾವೋ ಅವರಿಗೆ ಕೋಮಿನ್‌ತಾಂಗ್ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸುವುದಕ್ಕೆ ಹೆಚ್ಚು ಕಾಲ ಬೇಡವೆಂಬ ಆತ್ಮವಿಶ್ವಾಸ ಮೂಡಿತ್ತು. ೧೯೪೯ರ ಜನವರಿ ತಿಂಗಳಲ್ಲಿ ಮುಖ್ಯ ನಗರ ತಿಯೆಂತ್‌ಸಿನ್, ಕಮ್ಯುನಿಸ್ಟ್ ಸೇನೆಯ ವಶವಾಯಿತು. ೧೯೪೯ರ ಮೇ ತಿಂಗಳಲ್ಲಿ ನಾನ್‌ಕಿಂಗ್ ಮತ್ತು

ಷಾಂಗೈ ನಗರಗಳು ಕಮ್ಯುನಿಸ್ಟ್ ಸೇನೆಗೆ ಶರಣಾಗತವಾದವು. ಕ್ರಮೇಣ ಇತರ ನಗರಗಳೂ ಕಮ್ಯುನಿಸ್ಟ್ ಸೇನೆಯ ವಶವಾದುವು. ೧೯೪೯ನೆ ಅಕ್ಟೋಬರ್ ೧ನೇ ತಾರೀಖು ಪೀಕಿಂಗಿನಲ್ಲಿ ಚೀಣೀ ಜನತಾ ಗಣರಾಜ್ಯವನ್ನು ಮಾವೋ ಸ್ಥಾಪಿಸಿ, ನವಚೀಣಾದ ಉದಯಕ್ಕೆ ಕಾರಣಕರ್ತರಾದರು.

ಚಿಯಾಂಗ್ ಕೈಷೆಕ್ ತಮ್ಮ ಸೈನ್ಯಕ್ಕೆ ಸೋಲಾದುದನ್ನು ಕಂಡು, ಚೀಣಾ ಪ್ರದೇಶವನ್ನು ಬಿಟ್ಟು ತೈವಾನ್ ದ್ವೀಪಕ್ಕೆ ಓಡಿ ಹೋದರು. ಕೋಮಿನ್‌ತಾಂಗ್ ಸರ್ಕಾರದ ಪತನಕ್ಕೆ ಮುಖ್ಯ ಕಾರಣ ಅವರ ಅಶುದ್ಧ ಆಡಳಿತ. ಸ್ವಾರ್ಥಪರರೂ ಶ್ರೀಮಂತರೂ ಸರ್ಕಾರವನ್ನು ತಮ್ಮ ಸುಖ ಸಾಧನೆಗಳಿಗಾಗಿ ಬಳಸಿಕೊಂಡದ್ದ ರಿಂದ ತ್ವರಿತಗತಿಯಲ್ಲಿ ಅದರ ಪತನವಾಯಿತು. ಅಜ್ಞಾನ, ಬಡತನ, ಅಶಿಸ್ತು, ದಬ್ಬಾಳಿಕೆ, ಭ್ರಷ್ಟಾಚಾರಗಳ ವಿರುದ್ಧ ಹೋರಾಡಲು ನಿಂತ ಧೀರವ್ಯಕ್ತಿ ಮಾವೋ. ಅವರು ಕಮ್ಯು ನಿಸ್ಟ್ ಸೇನೆಯಲ್ಲಿ ಶಿಸ್ತು, ಶೀಲವಂತಿಕೆ, ಆತ್ಮವಿಶ್ವಾಸಗಳನ್ನು ಮೂಡಿಸಿದುದರಿಂದಲೆ, ತಮಗಿಂತಲೂ ಸಂಖ್ಯೆಯಲ್ಲಿ, ಆಧುನಿಕ ಶಸ್ತ್ರಾಸ್ತ್ರಗಳಲ್ಲಿ, ನೌಕಾಬಲ ವಿಮಾನಬಲಗಳಲ್ಲಿ ಸುಸಜ್ಜಿತವಾದ ಕೋಮಿನ್‌ತಾಂಗ್ ಸೈನ್ಯವನ್ನು ಸೋಲಿಸುವುದು ಸಾಧ್ಯವಾಯಿತು. ಜನತೆಯ ಪ್ರೀತಿಯನ್ನು ಗಳಿಸಿ, ಚೀಣೀ ಜನತೆಯ ಅಭ್ಯುದಯ ಕ್ಕಾಗಿ ಹೋರಾಡಿದುದರಿಂದಲೇ ಅವರಿಗೆ ವಿಜಯ ಲಭಿಸಿತು.

## ೬. ರಾಷ್ಟ್ರಾಧ್ಯಕ್ಷ

ಬೃಹತ್‌ರಾಷ್ಟ್ರವಾದ ಚೀಣಾದ ರಾಷ್ಟ್ರಾಧ್ಯಕ್ಷರು ಮಾವೋ ತ್ಸೆ-ತುಂಗ್ ಆದರೂ ಅಮೆರಿಕ ಮಾತ್ರ ಚಿಕ್ಕ ದ್ವೀಪವಾದ ತೈವಾನಿನಲ್ಲಿ ನೆಲಸಿದ ಚಿಯಾಂಗ್ ಕೈಷೆಕರನ್ನೇ ಚೀಣಾದ ನಾಯಕ

ರೆಂದು ಗೌರವಿಸಿತು. ವಿಶ್ವಸಂಸ್ಥೆಯಲ್ಲಿ ನವಚೀಣಾಕ್ಕೆ ಪ್ರಾತಿನಿಧ್ಯ ಸಿಗಲಿಲ್ಲ. ಪ್ರಪಂಚದ ಹಲವು ರಾಷ್ಟ್ರಗಳು ನವಚೀಣಾಕ್ಕೆ ಮಾನ್ಯತೆ ನೀಡುವುದರಲ್ಲಿ ವಿಳಂಬ ನೀತಿಯನ್ನು ತಾಳಿದವು. ಅಮೆರಿಕದ ಅಪಾರ ನೆರವನ್ನು ಪಡೆದು ತೈವಾನಿನಲ್ಲಿ ನೆಲಸಿದ ಚಿಯಾಂಗರು ಮಾವೋ ಅವರ ಮೇಲೆ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದರು.

ನವಚೀಣಾದ ಪರಿಸ್ಥಿತಿ ಬಹು ಕಷ್ಟದಲ್ಲಿತ್ತು. ಹಲವಾರು ವರ್ಷಗಳ ಯುದ್ಧಗಳಿಂದ ರಾಷ್ಟ್ರದ ಅಭಿವೃದ್ಧಿ ಸ್ಥಗಿತವಾಗಿತ್ತು. ಭೀಕರ ಕದನಗಳ ಪರಿಣಾಮವಾಗಿ ಹಲವು ನಗರಗಳು ಅಸ್ತವ್ಯಸ್ತವಾಗಿದ್ದವು. ಕೆಲವುಕಡೆ ದೇಶ ಕ್ಷಾಮವನ್ನೆದುರಿಸುತ್ತಿತ್ತು. ಜನರು ನಿಸ್ತೇಜರಾಗಿದ್ದರು. ರಾಷ್ಟ್ರದ ಸಮಸ್ಯೆಗಳನ್ನು ಪರಿಹರಿಸಲು ಅಧ್ಯಕ್ಷ ಮಾವೋ ಮತ್ತು ಪ್ರಧಾನಿ ಚೌಎನ್‌ಲಾಯ್ ಸೊಂಟಕಟ್ಟಿ ಕೆಲಸ ಮಾಡಿದರು. ಅವರಿಬ್ಬರ ದೃಷ್ಟಿ ಕೃಷಿ ಉತ್ಪನ್ನ, ರಕ್ಷಣಾ ವ್ಯವಸ್ಥೆ, ಸಾರಿಗೆ ವ್ಯವಸ್ಥೆ, ಹಣದ ಉಬ್ಬರದ ನಿವಾರಣೆ, ಆರ್ಥಿಕ ಅಭಿವೃದ್ಧಿ–ಇತ್ತಕಡೆ ಹರಿಯಿತು. ಆಡಳಿತದಲ್ಲಿ ಕಮ್ಯುನಿಸ್ಟ್ ತತ್ತ್ವಗಳಿಗೆ ಪ್ರಾಧಾನ್ಯ ದೊರಕಿತು. ಮಾರ್ಕ್ಸ್ ತತ್ತ್ವಕ್ಕನುಗುಣವಾಗಿ ಜಮೀನುಗಳ ಸೂಕ್ತ ವಿತರಣೆಯಾಯಿತು. ಮಹಿಳೆಯರಿಗೆ ಸ್ವಾತಂತ್ರ್ಯ ದೊರಕಿತು. ವೈಜ್ಞಾನಿಕ ದೃಷ್ಟಿಗೆ ಪುರಸ್ಕಾರ ಲಭಿಸಿತು. ಕೈಗಾರಿಕೆಯ ಅಭಿವೃದ್ಧಿಯಾಯಿತು. ಮಾವೋ ೧೯೪೯ರ ಡಿಸೆಂಬರ್ ೧೬ರಂದು ಮಾಸ್ಕೋ ನಗರಕ್ಕೆ ಹೋಗಿ, ಅಲ್ಲಿ ಸ್ಟಾಲಿನ್ನರ ೭೦ನೆ ವರ್ಷದ ಜನ್ಮದಿನದಲ್ಲಿ ಭಾಗವಹಿಸಿದರು. ಅನಂತರ ಒಂಬತ್ತು ವಾರಗಳ ಕಾಲ ಸೋವಿಯೆತ್ ದೇಶದಲ್ಲಿ ಸಂಚರಿಸಿ, ಆ ಬೃಹತ್ ರಾಷ್ಟ್ರದ ಪ್ರಗತಿಯನ್ನು ಅಧ್ಯಯನ ಮಾಡಿದರು. ಸೋವಿಯೆತ್ ದೇಶದೊಡನೆ

ಉತ್ತಮ ಬಾಂಧವ್ಯವನ್ನು ಅವರು ಬೆಳೆಸಿಕೊಂಡರು. ಸೋವಿಯೆತ್ ದೇಶ ಹೊಸದಾಗಿ ರೂಪಿತವಾದ ನವಚೀಣಾಕ್ಕೆ ಎಲ್ಲ ರೀತಿಯ ನೆರವನ್ನು ನೀಡಲು ಸಿದ್ಧವಾಯಿತು.

ಸೋವಿಯೆತ್ ದೇಶದಿಂದ ಹಿಂತಿರುಗಿದ ಮಾವೋ ರಾಷ್ಟ್ರದಲ್ಲಿದ್ದ ಭ್ರಷ್ಟಾಚಾರ, ಲಂಚಕೋರತನ, ಮೋಸ, ಅಕೃತ್ಯ ಮೊದಲಾದ ರಾಷ್ಟ್ರ ವಿರೋಧಿ ಚಟುವಟಿಕೆಗಳನ್ನು ಹತ್ತಿಕ್ಕಲು ಸೂಕ್ತ ವ್ಯವಸ್ಥೆ ಮಾಡಿದರು. ರಾಷ್ಟ್ರದ ಮೊದಲ ಪಂಚವಾರ್ಷಿಕ ಯೋಜನೆ ಆರಂಭವಾದುದು ೧೯೫೩ರಲ್ಲಿ. ಈ ಯೋಜನೆಗೆ ಆರ್ಥಿಕವಾಗಿ, ತಾಂತ್ರಿಕವಾಗಿ ಎಲ್ಲ ರೀತಿಯ ನೆರವು ಸೋವಿಯೆತ್ ದೇಶದಿಂದ ಲಭಿಸಿತು. ಸರ್ವತೋಮುಖವಾದ ವಿಕಾಸಕ್ಕಾಗಿ ಚೀಣಾ ಯತ್ನಿಸಿದುದರಿಂದಲೆ, ೧೯೬೦-೬೨ರಲ್ಲಿ ರಾಷ್ಟ್ರವನ್ನು ಅಪ್ಪಳಿಸಿದ ಭಯಂಕರ ಕ್ಷಾಮವನ್ನು ಎದುರಿಸಲು ರಾಷ್ಟ್ರ ಸಮರ್ಥವಾಯಿತು. ೧೯೫೦ರಲ್ಲಿ ದಕ್ಷಿಣ ಕೊರಿಯಾಕ್ಕೂ ಉತ್ತರ ಕೊರಿಯಾಕ್ಕೂ ಯುದ್ಧ ಆರಂಭವಾಯಿತು. ದಕ್ಷಿಣ ಕೊರಿಯಾಕ್ಕೆ ಅಮೆರಿಕ ಸಹಾಯ ಮಾಡಿತು. ಉತ್ತರ ಕೊರಿಯಾಕ್ಕೆ ಸೋವಿಯೆತ್ ದೇಶ ಮತ್ತು ಚೀಣಾ ಬೆಂಬಲ ನೀಡಿದವು. ೧೯೫೩ರಲ್ಲಿ ಉತ್ತರ ಕೊರಿಯಾಕ್ಕೆ ಜಯವಾಯಿತು.

೧೯೫೭ರಲ್ಲಿ 'ನೂರು ಹೂವುಗಳ ಚಳುವಳಿ' ಎಂಬ ಕಾರ್ಯಕ್ರಮವನ್ನು ಮಾವೋ ಆರಂಭಿಸಿದರು. ಈ ಕಾರ್ಯಕ್ರಮದಿಂದ ಬುದ್ಧಿಜೀವಿಗಳಿಗೆ ಸರ್ಕಾರವನ್ನೂ ಭ್ರಷ್ಟಾಚಾರವನ್ನೂ ಟೀಕಿಸುವ ಸ್ವಾತಂತ್ರ್ಯ ಲಭಿಸಿತು. ಬುದ್ಧಿಜೀವಿಗಳು ನಾನಾ ರೀತಿಯಲ್ಲಿ ಸರ್ಕಾರವನ್ನು ಟೀಕಿಸಲು ತೊಡಗಿದರು. ಬುದ್ಧಿಜೀವಿಗಳಲ್ಲಿ ಎಷ್ಟೊಂದು ಮಂದಿ ಪ್ರತಿಗಾಮಿಗಳಿದ್ದಾರೆ? ಎಂಬುದನ್ನು ತಿಳಿಯಲು ಮಾವೋಗೆ ಈ ಕಾರ್ಯಕ್ರಮದಿಂದ ಸಹಾಯ

ವಾಯಿತು. ಕೆಲವು ದಿನಗಳಲ್ಲಿ ಬುದ್ಧಿಜೀವಿಗಳು ತಮಗೆ ದೊರಕಿದ ಸ್ವಾತಂತ್ರ್ಯವನ್ನು ದುರುಪಯೋಗಪಡಿಸಿಕೊಂಡು ಕಮ್ಯುನಿಸ್ಟ್ ತತ್ತ್ವಗಳನ್ನೇ ಟೀಕಿಸಲು ಆರಂಭಿಸಿದರು. ಆಗ ಮಾವೋ 'ನೂರು ಹೂವುಗಳ ಚಳುವಳಿ'ಯನ್ನು ನಿಲ್ಲಿಸಿಬಿಟ್ಟರು. ೧೯೫೮ರಿಂದ ೧೯೬೦ ರವರೆಗೆ ಮಾವೋ 'ಕ್ಷಿಪ್ರ ಮುನ್ನಡೆ' ಎಂಬ ಕಾರ್ಯಕ್ರಮವನ್ನು ಆರಂಭಿಸಿದರು. ಇದರಿಂದ ತ್ವರಿತವಾಗಿ ರಾಷ್ಟ್ರದ ಮುನ್ನಡೆಯಾಗ ಬೇಕೆಂಬುದು ಅವರ ಆಶಯವಾಗಿತ್ತು. ಎಲ್ಲರೂ ಎಲ್ಲ ಕ್ಷೇತ್ರ ಗಳಲ್ಲಿ ಹೆಚ್ಚಿನ ಕೆಲಸ ಮಾಡಬೇಕೆಂಬುದು ನಿಯಮವಾಯಿತು. ೧೯೫೮ರಲ್ಲಿ ಮಾವೋ ರಾಷ್ಟ್ರಾಧ್ಯಕ್ಷ ಸ್ಥಾನವನ್ನು ಬಿಟ್ಟು ಕೇವಲ ಕಮ್ಯುನಿಸ್ಟ್ ಪಕ್ಷದ ಅಧ್ಯಕ್ಷರಾದರು. ಲಿಯು ಷಾವೋ ಚಿ ಅವರು ರಾಷ್ಟ್ರಾಧ್ಯಕ್ಷರಾದರು.

ಸೋವಿಯೆತ್ ದೇಶದೊಡನೆ ನಿಕಟ ಸ್ನೇಹವನ್ನಿಟ್ಟುಕೊಂಡು ಮಾವೋ ೧೯೬೦ರಿಂದ ತಮ್ಮ ಪ್ರತಿಷ್ಠೆಯನ್ನು ಹೆಚ್ಚು ಮಾಡಿ ಕೊಂಡದ್ದರಿಂದ ಚೀಣಾ ಮತ್ತು ಸೋವಿಯೆತ್ ಸ್ನೇಹವಲ್ಲಿ ಒಡಕುಂಟಾಯಿತು. ಮಾವೋ ತಮ್ಮ ರಾಷ್ಟ್ರದಲ್ಲಿ ಪ್ರತಿಷ್ಠಿತ ವ್ಯಕ್ತಿ ಯಾದ ಬಳಿಕ, ತಾವೇ ವಿಶ್ವಕಮ್ಯುನಿಸ್ಟ್ ನಾಯಕರಾಗಲು ಯೋಗ್ಯರೆಂದು ಭಾವಿಸಿದರು. ಈ ಭಾವನೆ ಸೋವಿಯೆತ್ ದೇಶಕ್ಕೆ ಸರಿಕಾಣಲಿಲ್ಲ. 'ನೂರು ಹೂವುಗಳ ಚಳವಳಿ' ವಿಫಲ ವಾದಾಗ, ಸೋವಿಯೆತ್ ದೇಶ ಮಾವೋ ಅವರಿಗೆ ಎಚ್ಚರಿಕೆ ನೀಡಿ, ಕಮ್ಯುನಿಸ್ಟ್ ತತ್ತ್ವಗಳಿಗೆ ಅಪಚಾರವಾಗುವ ಯಾವ ಯೋಜನೆಯನ್ನೂ ರೂಪಿಸಬಾರದೆಂಬ ಸಲಹೆ ಮಾಡಿತು. ೧೯೬೨ರ ಹೊತ್ತಿಗೆ ಮಾವೋ ಸೋವಿಯೆತ್ ದೇಶವನ್ನು ವಿರೋಧಿಸ ತೊಡಗಿದರು. ಚೀಣಾ ದ್ವೇಷಿಯಾದ ಅಮೆರಿಕದೊಡನೆ ಅವರು ಸ್ನೇಹ ಬೆಳೆಸಿಕೊಳ್ಳಲು ಆರಂಭಿಸಿದರು.

ಮಾವೋ ೧೯೫೦ ರಿಂದ ತಮ್ಮ ರಾಷ್ಟ್ರವನ್ನು ವಿಸ್ತರಿಸುವ ಯೋಜನೆಯಲ್ಲಿ ಆಸಕ್ತರಾದರು. ಅವರ ದೃಷ್ಟಿ ಟಿಬೆಟ್ ಕಡೆ ಹರಿಯಿತು. ಕ್ರಮಕ್ರಮವಾಗಿ ಟಿಬೆಟ್ಟನ್ನು ಆಕ್ರಮಿಸುತ್ತ ಕಡೆಗೆ ಟಿಬೆಟ್ಟಿನ ದಲಾಯಿ ಲಾಮಾ ಅವರು ತಮ್ಮ ಪರಿವಾರದೊಂದಿಗೆ ಮಾರ್ಚಿ ೨೧, ೧೯೫೯ ರಂದು ಭಾರತಕ್ಕೆ ಪ್ರವೇಶಿಸಿ ಇಲ್ಲಿಯೇ ಆಶ್ರಯ ಪಡೆದು ನೆಲಸುವಂತಾಯಿತು. ಚೀಣಾ ಟಿಬೆಟ್ಟನ್ನ ಸಂಪೂರ್ಣವಾಗಿ ಆಕ್ರಮಿಸಿಕೊಂಡಿತು. ಆಗ ಭಾರತದ ಪ್ರಧಾನಿ ಯಾಗಿದ್ದ ನೆಹ್ರೂ ಅವರು ದಲಾಯಿ ಲಾಮಾ ಅವರಿಗೆ ಆಶ್ರಯ ನೀಡಿದ್ದು ಕೇವಲ ಮಾನವೀಯ ದೃಷ್ಟಿಯಿಂದ. ಶಾಂತಿ ಹಾಗೂ ಮೈತ್ರಿ ಪ್ರಿಯರಾದ ನೆಹ್ರೂ ಏಷ್ಯಾದ ಮೇಲೆ ಪ್ರಭಾವ ಬೀರಿದ್ದರು. ಮಾವೋ ಅವರಿಗೆ ತಾವೇ ಏಷ್ಯಾದ ನಾಯಕರೆಂಬ ಪ್ರತಿಷ್ಠೆ ಮೂಡಿತ್ತು. ನೆಹ್ರೂ ದಲಾಯಿಲಾಮಾ ಅವರಿಗೆ ಆಶ್ರಯ ಕೊಟ್ಟದ್ದು ಮಾವೋ ಅವರಿಗೆ ಸರಿಬೀಳಲಿಲ್ಲ. ಅವರು ಭಾರತದ ಮ್ಯಕ್‌ಮೋಹನ್ ರೇಖೆಯ ಗಡಿಯನ್ನು ಒಪ್ಪದೆ ಭಾರತದ ೪೫,೦೦೦ ಚದರ ಮೈಲಿಗಳ ಪ್ರದೇಶ ತನ್ನದೆಂದು ವಾದ ಹೂಡಿದರು. ೧೯೫೬ರಲ್ಲಿ ನೆಹ್ರೂ ಅವರು ಚೀಣಾದೇಶದ ಪ್ರಧಾನಿ ಚೌಎನ್‌ಲಾಯ್ ಅವರೊಡನೆ ಭಾರತದ ಗಡಿ ಮ್ಯಕ್‌ಮೋಹನ್ ರೇಖೆಗೆ ಸೀಮಿತ ಎಂಬುದನ್ನು ಸ್ಪಷ್ಟಪಡಿಸಿದ್ದರು. ಚೌಎನ್‌ಲಾಯ್ ಅವರೂ ಒಂದು ರೀತಿಯಲ್ಲಿ ನೆಹ್ರೂ ಅವರ ಅಭಿಪ್ರಾಯಗಳನ್ನು ಒಪ್ಪಿದ್ದರು. ಆದರೆ ದಲಾಯಿ ಲಾಮಾ ಅವರಿಗೆ ಭಾರತದಲ್ಲಿ ಆಶ್ರಯ ಸಿಕ್ಕಿದ ಬಳಿಕ ಮಾವೋ ಧೋರಣೆ ಬೇರೆಯಾಯಿತು.

ಹಿಮಾಚ್ಛಾದಿತ ಪರ್ವತ ಪ್ರದೇಶಗಳಲ್ಲಿ ಯುದ್ಧ ಮಾಡುವ ತಂತ್ರದಲ್ಲಿ ಚೀಣೀಯರು ಪಳಗಿದ್ದರು. ಅವರಲ್ಲಿ ಆಧುನಿಕ

ಶಸ್ತ್ರಾಸ್ತ್ರಗಳಿದ್ದುವು. ನೆಹ್ರೂ ಅವರು "ಭಾರತ ಚೀಣೀ ಭಾಯಿ ಭಾಯಿ" ಎಂಬ ಗುಂಗಿನಲ್ಲಿದ್ದರು. ೧೯೬೨ರ ವರೆಗೆ ವ್ಯವಸ್ಥಿತವಾಗಿ ಯುದ್ಧಸನ್ನದ್ಧವಾದ ಚೀಣೀ ಸೇನೆ ಅಕ್ಟೋಬರ್ ೨೦, ೧೯೬೨ರಲ್ಲಿ ಭಾರತದ ಗಡಿಯೊಳಕ್ಕೆ ಪ್ರವೇಶಿಸಿ, ಭಾರತದ ವಾಯುವ್ಯ ಭಾಗದ ಸುಮಾರು ೨೦,೦೦೦ ಚದರ ಮೈಲಿಗಳ ಪ್ರದೇಶವನ್ನೂ, ಈಶಾನ್ಯ ಭಾಗದ ಸುಮಾರು ೧೫,೦೦೦ ಚದರ ಮೈಲಿಗಳ ಪ್ರದೇಶವನ್ನೂ ಆಕ್ರಮಿಸಿಕೊಂಡಿತು. ಚೀಣೀ ಸೈನ್ಯವನ್ನು ಎದುರಿಸಿದ ಭಾರತ ಸೈನ್ಯದ ೨೫೦೦ ಮಂದಿ ಸೈನಿಕರು ಹತರಾದರು. ನವೆಂಬರ್ ೨೧. ೧೯೬೨ರಂದು ಚೀಣೀ ಸೈನ್ಯ ಕದನವಿರಾಮವನ್ನು ಘೋಷಿಸಿತು. ಆಗ ನೆಹ್ರೂ ಎಚ್ಚೆತ್ತುಕೊಂಡು ಗಡಿ ಪ್ರದೇಶಗಳ ಕಡೆಗೆ ಗಮನ ವಿತ್ತರು. ಚೀಣೀಯರು ತಾವು ಆಕ್ರಮಿಸಿದ ಭೂಭಾಗಗಳನ್ನು ಇದುವರೆಗೆ ಭಾರತಕ್ಕೆ ಹಿಂತಿರುಗಿಸಿಲ್ಲ. ಭಾರತದ ದೌರ್ಬಲ್ಯ ವನ್ನು ಕಂಡೇ ಅವರು ಮುನ್ನುಗ್ಗಿ ಭಾರತದ ಭಾಗಗಳನ್ನು ಕಬಳಿಸಿದರು.

೧೯೬೪ರಲ್ಲಿ ಚೀಣಾ ಅಣುಬಾಂಬನ್ನು ಸಿದ್ಧಪಡಿಸಿದ ಏಷ್ಯಾದ ಪ್ರಮುಖ ರಾಷ್ಟ್ರವಾಯಿತು. ಚೀಣಾ ಬಲಿಷ್ಠ ರಾಷ್ಟ್ರವೆಂಬುದು ಇತರರಿಗೂ ತಿಳಿಯಿತು. ೧೯೬೬ರಲ್ಲಿ ಮಾವೋ 'ಸಾಂಸ್ಕೃತಿಕ ಕ್ರಾಂತಿ'ಯನ್ನು ಆರಂಭಿಸಿದರು. ಚೀಣೀ ಜನತೆಯನ್ನು ಸಮಾಜ ವಾದದಲ್ಲಿ ಸುಶಿಕ್ಷಿತರನ್ನಾಗಿ ಮಾಡುವುದೇ ಈ ಕ್ರಾಂತಿಯ ಉದ್ದೇಶವಾಗಿತ್ತು. ಅದರೊಡನೆ ಜನರಲ್ಲಿ ವರ್ಗಭೇದವನ್ನು ತೊಡೆದುಹಾಕುವ ಶಿಕ್ಷಣ ನೀಡುವ ಗುರಿಯೂ ಇತ್ತು. ಈ ಕ್ರಾಂತಿಯ ಯೋಜನೆಯಲ್ಲಿ ಸುಭದ್ರ ರಾಜಕೀಯ ಹಾಗೂ ಆರ್ಥಿಕ ವ್ಯವಸ್ಥೆ. ಸುಧಾರಣೆ, ಸಮಾಜವಾದದಲ್ಲಿ ಸೂಕ್ತ ಶಿಕ್ಷಣ, ಪ್ರತಿಗಾಮಿಗಳನ್ನು ಬಯಲಿಗೆಳೆಯುವುದು–ಇವೆಲ್ಲ ಓತಪ್ರೋತ

ವಾಗಿದ್ದುವು ೧೯೬೬ರ ಜೂನ್ ತಿಂಗಳಿಂದ ಆರು ತಿಂಗಳವರೆಗೆ ಶಾಲಾ ಕಾಲೇಜುಗಳನ್ನು ಮುಚ್ಚಲು ಮಾವೋ ಆದೇಶ ನೀಡಿದರು. ವಿದ್ಯಾರ್ಥಿಗಳು ಗ್ರಾಮಾಂತರ ಪ್ರದೇಶಗಳಿಗೆ ಹೋಗಿ ರೈತರೊಡನೆ ಕೆಲಸಕ್ಕೆ ಆರಂಭಿಸಿದರು. ವಿದ್ಯಾರ್ಥಿಗಳು ಸಮಾಜವಾದದಲ್ಲಿ ಆಸಕ್ತರನ್ನಾಗಿ ಮಾಡಲು ರೆಡ್ ಗಾರ್ಡ್ (ಕೆಂಪು ರಕ್ಷಕರು) ಎಂಬ ಚಳವಳಿ ಆರಂಭವಾಯಿತು. ವಿದ್ಯಾರ್ಥಿಗಳಿಗೆ ಭ್ರಷ್ಟಾಚಾರಿಗಳನ್ನೂ ಬಂಡವಾಳಷಾಹಿಗಳನ್ನೂ ಪತ್ತೆ ಹಚ್ಚುವ ಸ್ವಾತಂತ್ರ್ಯ ಸಿಕ್ಕಿತು. ವಿದ್ಯಾರ್ಥಿಗಳಲ್ಲಿ ರೆಡ್ ಗಾರ್ಡ್‌ಗಳು ಹಾಗೂ ಅಲ್ಲದವರು ಎಂಬ ಎರಡು ಪಕ್ಷವಾಗಿ, ಅವರಲ್ಲಿಯೇ ಕಲಹವಾಗಲಾರಂಭವಾಯಿತು. ರೆಡ್‌ಗಾರ್ಡ್‌ಗಳು ಅಧಿಕಾರದ ರುಚಿ ನೋಡಲು ಕಾತರಿಸಿ, ತಾವೇ ವಿರೋಧಿಗಳನ್ನು ಶಿಕ್ಷಿಸುವ ಕಾರ್ಯದಲ್ಲಿ ತೊಡಗಿದರು. ಈ ರೆಡ್ ಗಾರ್ಡ್‌ಗಳು ಅಂದು ರಾಷ್ಟ್ರಾಧ್ಯಕ್ಷರಾದ ಲಿಯು ಷಾವೋ-ಚಿ ಅವರು ನಿವೃತ್ತರಾಗುವಂತೆ ಮಾಡಿದರು.

೧೯೬೫ ರಲ್ಲಿಯೇ ಚೀಣಾದ ಸೇನಾನಿ ಲಿನ್ ಪಿಯಾವೋ ಅವರು ಮಾಡಿದ ಘೋಷಣೆ ಹೀಗಿತ್ತು :

"ಬಂಡವಾಳಷಾಹಿ ಮನೋಧರ್ಮವಿರುವವರನ್ನೂ ಸಾಂಸ್ಕೃತಿಕ ಕ್ರಾಂತಿಯನ್ನು ವಿರೋಧಿಸುವವರನ್ನೂ ಉಗ್ರಶಿಕ್ಷೆಗೆ ಗುರಿಪಡಿಸುತ್ತೇವೆ. ಸಮಾಜವಾದಿ ಆರ್ಥಿಕ ವಿಕಾಸವನ್ನು ತಡೆಗಟ್ಟುವ ಅರ್ಥವಿಲ್ಲದ ಸಂಪ್ರದಾಯ ಹಾಗೂ ಆಚಾರಗಳನ್ನು ಹತ್ತಿಕ್ಕುತ್ತೇವೆ."

ಈ ಘೋಷಣೆಗಳನ್ನು ಅರ್ಥಮಾಡಿಕೊಳ್ಳದ ರೆಡ್ ಗಾರ್ಡ್‌ಗಳು ಅಧಿಕಾರದ ಹುಚ್ಚು ಸೆಳೆತಕ್ಕೆ ಸಿಕ್ಕಿ ದಾರಿತಪ್ಪಿದರು. ಆಗ ಶಾಲಾ ಕಾಲೇಜುಗಳನ್ನು ಪುನಃ ಆರಂಭಿಸಿ, ವಿದ್ಯಾರ್ಥಿಗಳೆಲ್ಲರೂ ಅಧ್ಯಯನಕ್ಕೆ ಹಿಂತಿರುಗಬೇಕೆಂದು ಮಾವೋ ಆದೇಶ

ನೀಡಿದರು. ಅಧಿಕಾರದ ಸವಿ ನೋಡಿದ ವಿದ್ಯಾರ್ಥಿಗಳು ಮಾವೋ ಅವರ ಆದೇಶವನ್ನು ಪಾಲಿಸಲಿಲ್ಲ. ಆಗ ಸೈನಿಕ ಕಾರ್ಯಾಚರಣೆ ಯಿಂದ ವಿದ್ಯಾರ್ಥಿಗಳನ್ನು ನಿಯಂತ್ರಿಸಬೇಕಾಯಿತು.

೧೯೬೯ ರ ಏಪ್ರಿಲ್ ೧ನೆಯ ತಾರೀಖು, ಚೀಣೀ ಕಮ್ಯುನಿಸ್ಟ್ ಪಕ್ಷದ ಸಭೆ ಸೇರಿ, ವಿದ್ಯಾಭ್ಯಾಸದಲ್ಲಿ ರಾಜ್ಯಶಾಸ್ತ್ರ, ಕ್ರಾಂತಿಕಾರಿ ಕಲೆ, ಸೈನಿಕ ಶಿಕ್ಷಣ ಮತ್ತು ಉತ್ಪತ್ತಿಗಾಗಿ ಕಾಯಕವೂ ವಿದ್ಯಾಭ್ಯಾಸದ ಇತರ ವಿಷಯಗಳೊಡನೆ ಆವಶ್ಯಕವೆಂಬುದನ್ನು ತೀರ್ಮಾನಿಸಿತು. ವಿದ್ಯಾರ್ಥಿಗಳು ಕಾಯಕದಲ್ಲಿಯೂ ತೊಡಗಿದುದರಿಂದ, ಅವರಿಗೂ ರಾಷ್ಟ್ರಕ್ಕೂ ಪ್ರಯೋಜನವಾಯಿತು. ಸಾಂಸ್ಕೃತಿಕ ಕ್ರಾಂತಿ ಸ್ಥಗಿತಗೊಂಡು, ಕಮ್ಯುನಿಸ್ಟ್ ಪಕ್ಷವೇ ಕ್ರಾಂತಿಯ ಕಾರ್ಯಾಚರಣೆಯನ್ನು ಮುಂದುವರಿಸಿತು.

## ೭. ಕೊನೆಯ ದಿನಗಳು

ಮಾವೋ ಕಾರ್ಯರೂಪಕ್ಕೆ ತರಬೇಕೆಂದಿದ್ದ ಅನೇಕ ಯೋಜನೆಗಳು ನಿರೀಕ್ಷಿತ ಫಲಗಳನ್ನು ಕೊಡದಿದ್ದಾಗ, ಅವರ ಸಹೋದ್ಯೋಗಿಗಳಿಗೆ ನೋವಾಗುತ್ತಿತ್ತು. ನವಚೀಣಾದ ಸೇನಾನಿ ಲಿನ್ ಪಿಯಾವೋ ಅವರಿಗೆ ಮಾವೋ ಅವರಲ್ಲಿ ತುಂಬ ಗೌರವ. ಆದರೆ ಮಾವೋ ಅವರ ಯೋಜನೆಗಳಿಂದ 'ಕ್ಷಿಪ್ರ ಮುನ್ನಡೆ' ಮತ್ತು 'ಸಾಂಸ್ಕೃತಿಕ ಕ್ರಾಂತಿ'ಗಳು ಲಿನ್ ಅವರಿಗೆ ಅಪ್ರಿಯವಾದವು ೧೯೭೧ ರಲ್ಲಿ ಅವರು ವಿಮಾನ ಅಪಘಾತದಲ್ಲಿ ಸಿಕ್ಕಿ ಸತ್ತರು.

ಮಾವೋ ಅವರಿಗೆ ಪ್ರಪಂಚದಲ್ಲಿಯೇ ಎಲ್ಲ ಕ್ಷೇತ್ರಗಳಲ್ಲಿ ಚೀಣಾ ಮುಂದಿರಬೇಕೆಂಬ ಆಶೆ ಇತ್ತು. ಅವರ ಇಚ್ಛೆ ಸಂಪೂರ್ಣವಾಗಿ ಫಲಿಸದಿದ್ದರೂ ರಾಷ್ಟ್ರ ಸಾಕಷ್ಟು ಪ್ರಗತಿಯನ್ನು ಸಾಧಿಸಿತ್ತು. ಅವರಿಗೆ ವೃದ್ಧಾಪ್ಯದಲ್ಲಿಯೂ ಉತ್ಸಾಹ ತಗ್ಗಿರಲಿಲ್ಲ. ೧೯೭೭ ರಲ್ಲಿ

ಚೀಣಾ ಹೈಡ್ರೋಜನ್ ಬಾಂಬನ್ನು ಸಿದ್ಧಪಡಿಸಿತು. ೧೯೭೦ ರಲ್ಲಿ ಚೀಣಾ ಭೂ ಉಪಗ್ರಹವನ್ನು ಹಾರಿಸಿತು. "ಅಮೇರಿಕ ದೇಶದ ಪ್ರಗತಿಗೀತ ಹೆಚ್ಚಿನ ಪ್ರಗತಿಯನ್ನು ಸಾಧಿಸಿದಾಗ, ನಾನು ಈ ಲೋಕದಿಂದ ಕಣ್ಮರೆಯಾಗುತ್ತೇನೆ" ಎಂದು ಮಾವೋ ಹೇಳಿದ್ದರು. ಅವರಿಗೆ ಪ್ರಚಂಡ ಇಚ್ಛಾಶಕ್ತಿ ಇತ್ತು. ಅವರು ರಚಿಸಿದ ಒಂದು ಕವನದ ಎರಡು ಪಂಕ್ತಿಗಳು ಹೀಗಿವೆ :

ನಮ್ಮ ಕೆಂಪು ಸೇನೆ ಬಹುದೂರದ ಪಯಣಕಂಜುವುದಿಲ್ಲ.
ಸಹಸ್ರ ಪರ್ವತಗಳೂ ಸಹಸ್ರ ಸಹಸ್ರ ನದಿಗಳೂ
ಅದರ ಮುನ್ನಡೆಗೆ ಅಡ್ಡಿಯಲ್ಲ!

ಇಂಥ ಕೆಚ್ಚಿನಿಂದ ಕೂಡಿದ ವೀರರವರು. ಆದರೆ ಎಲ್ಲ ವೀರರನ್ನೂ ಮೆತ್ತಗೆ ಮಾಡುತ್ತದೆ ವಯಸ್ಸು. ಐವತ್ತಕ್ಕಿಂತ ಹೆಚ್ಚು ವರ್ಷಗಳ ಕಾಲ ಕ್ರಾಂತಿಕಾರಿಯಾಗಿ ಹೋರಾಡಿದ ಮಾವೋ ೧೯೭೬ ರ ಸೆಪ್ಟೆಂಬರ್ ೯ನೇ ತಾರೀಖು ಕಾಲವಾದರು. ಆಗ ಅವರಿಗೆ ೮೨ ವರ್ಷಗಳು ಕಳೆದು ೮೩ ನೆಯ ವರ್ಷ ತುಂಬಲು ಕೆಲವೇ ತಿಂಗಳಿದ್ದವು. ಅವರ ಪಾರ್ಥಿವ ಶರೀರವನ್ನು ಪೀಕಿಂಗಿನ ಮಾವೋ ಸ್ಮಾರಕ ಮಂದಿರದಲ್ಲಿರಿಸಿದ್ದಾರೆ. ಅವರ ಕಳೇಬರ ಕೆಡದಂತೆ ರಕ್ಷಿಸಿದ್ದಾರೆ.

ಮಾವೋ ಅವರು ಕಾಲವಾದ ಬಳಿಕ, ಅವರ ಪತ್ನಿಯವರಾದ ಚಿಯಾಂಗ್ ಚಿಂಗ್ ಅವರು ಕಮ್ಯೂನಿಸ್ಟ್ ಪಕ್ಷದ ಅಧ್ಯಕ್ಷರಾಗಲು ಆಶಿಸಿದರು. ಪಾಲಿಟ್‌ಬ್ಯೂರೋ ಸದಸ್ಯರಾದ ಚಾಂಗ್ ಚುನ್--ತ್ಸಿಯಾವೋ ಮತ್ತು ವಾಂಗ್ ಹುಂಗ್-ವೆನ್ ಅವರೂ ಮಾವೋ ಅವರ ಅಳಿಯಂದಿರಾದ ಯಾವೋ ವೆನ್-ಯುಯಾನ್ ಅವರೂ ಚಿಯಾಂಗ್ ಚಿಂಗ್ ಅವರಿಗೆ ಬೆಂಬಲ ನೀಡಿದರು. ಈ ನಾಲ್ವರ ಕೂಟ ಪ್ರಬಲವಾಗಿತ್ತು. ಆದರೆ ಕಮ್ಯೂನಿಸ್ಟ್ ಪಕ್ಷವು ಹುವಾ ಕೊ-ಫೆಂಗ್ ಅವರನ್ನೇ ಅಧ್ಯಕ್ಷರನ್ನಾಗಿ ಮಾಡಿತು.

## ೮. ಮಾವೋ ಅವರ ವ್ಯಕ್ತಿತ್ವ

ಮಾವೋ ಚಿಕ್ಕಂದಿನಿಂದಲೂ ಪುಸ್ತಕ ಪ್ರಿಯ. ಅವರಿಗೆ ಸ್ಫೂರ್ತಿ ನೀಡಿದ ಪುಸ್ತಕಗಳೆಂದರೆ ವೀರರ ಹಾಗೂ ಕ್ರಾಂತಿಕಾರರ ಜೀವನ ಚರಿತ್ರೆಗಳು. ನೆಪೋಲಿಯನ್, ಬಿಸ್‌ಮಾರ್ಕ್ ಮತ್ತು ಕೈಸರ್ ವಿಲ್‌ಹೆಲ್ಮ್ ಅವರ ಆರಾಧ್ಯಪುರುಷರು. ಅವರು ಚೀಣಿ ಸಾಹಿತ್ಯ ವನ್ನು ಚೆನ್ನಾಗಿ ಅಧ್ಯಯನ ಮಾಡಿದ್ದರು. ಮಾವೋ ಯುವಕ ರಾಗಿದ್ದಾಗ ಹ್ಸಿನ್ ಚಿಂಗ್ ನಿಯೇನ್ (ನವ ಯುವಶಕ್ತಿ) ಎಂಬ ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದರು. ಒಂದು ಲೇಖನದಲ್ಲಿ ಅವರು, "ನಮ್ಮ ದೇಶ ಶಕ್ತವಾಗಬೇಕಾದರೆ, ನಮ್ಮ ಸೈನಿಕ ಶಕ್ತಿಯನ್ನು ಬಲಪಡಿಸಬೇಕು" ಎಂದು ಬರೆದರು.

ಮಾವೋ ಅವರಿಗೆ ಉತ್ತಮ ದೈಹಿಕ ಶಕ್ತಿ ಇತ್ತು. ಗ್ರಾಮೀಣ ಜನತೆಯ ಸರಳ ವಿನೋದದ ಜೊತೆಗೆ ಬುದ್ಧಿಜೀವಿಯ ಅಂತರ್ಮುಖತೆಯೂ ಅವರಲ್ಲಿ ಮಿಳಿತವಾಗಿತ್ತು. ಅವರ ಸ್ಮೃತಿಶಕ್ತಿ ಹಾಗೂ ಏಕಾಗ್ರತೆ ಅಸಾಧಾರಣ. ಕಾರ್ಯದ ಪ್ರತಿಯೊಂದು ಅಂಶಕ್ಕೂ ಅವರು ಗಮನಕೊಡುತ್ತಿದ್ದರು. ಸೈನ್ಯ ಹಾಗೂ ರಾಜನೀತಿಯನ್ನು ರೂಪಿಸುವುದರಲ್ಲಿ ಅವರು ನಿಪುಣರು. ಉತ್ತಮ ಲೇಖನ ಕಲೆಯೂ ಕವಿತಾಶಕ್ತಿಯೂ ಅವರಲ್ಲಿತ್ತು. ಭಯಂಕರ ಯುದ್ಧದ ನಡುವೆಯೂ ಅವರು ಕವನ ರಚನೆ ಮಾಡಿದ್ದುಂಟು.

ಬಾಹ್ಯಾಡಂಬರಕ್ಕೆ ಅವರು ವಿಶೇಷ ಗಮನ ಕೊಡುತ್ತಿರಲಿಲ್ಲ. ಕರ್ತವ್ಯನಿಷ್ಠರಾದ ಅವರು ಮಾರ್ಕ್ಸ್ ತತ್ತ್ವಗಳನ್ನು ಅಧ್ಯಯನ ಮಾಡಿದ್ದರು. ರಾತ್ರಿಯ ವೇಳೆ ಬಹಳ ಕಾಲ ಅಧ್ಯಯನದಲ್ಲಿಯೂ ಇತರ ಕೆಲಸಗಳಲ್ಲಿಯೂ ಅವರು ಮಗ್ನರಾಗಿರುತ್ತಿದ್ದರು. ರಾಜಕೀಯ ವಿಚಾರಗಳಲ್ಲಿ ಅವರದು ಚಾಣಾಕ್ಷತನ. ತಮ್ಮ

ಭಾವನೆಗಳನ್ನು ಹೊರಗಡೆ ತೋರಿಸದೆ ಕೆಲಸ ಮಾಡುವ ತಂತ್ರ ಅವರಿಗೆ ತಿಳಿದಿತ್ತು. ಭಾರತದ ಸುಮಾರು ೩೫,೦೦೦ ಚದರ ಮೈಲಿಗಳ ಭೂಭಾಗವನ್ನು ಕಬಳಿಸಿದ್ದು ಕುಟಿಲೋಪಾಯದಿಂದಲೆ. ಸ್ವಾರ್ಥ ಸಾಧನೆಯ ಮುಂದೆ ನೀತಿ ನಿಯಮಗಳು ಗಾಳಿಪಾಲಾಗುತ್ತಿದ್ದುವು. ಎಲ್ಲರೊಡನೆ ಅವರು ಬೆರೆತಿದ್ದರೂ ಅವರು ಆಂತರಿಕವಾಗಿ ಏಕಾಂಗಿಯಾಗಿದ್ದರು. ೧೯೫೦ ರ ಫೆಬ್ರುವರಿಯಲ್ಲಿ ಸೋವಿಯೆತ್ ದೇಶದೊಡನೆ ಸ್ನೇಹ ಮತ್ತು ಪರಸ್ಪರ ಸಹಕಾರದ ಒಪ್ಪಂದಕ್ಕೆ ಅವರು ಸಹಿ ಹಾಕಿದಾಗ ಅವರು ಮಾಸ್ಕೋನಗರದಲ್ಲಿದ್ದರು. ಆಗ ಅವರು, "ಚೀಣಾ ಮತ್ತು ಸೋವಿಯೆತ್ ಸ್ನೇಹ ಅಮರ-ಅದನ್ನು ಯಾರೂ ಒಡೆಯಲಾರರು" ಎಂದು ಘೋಷಿಸಿದರು. ಆದರೆ ೧೯೬೦ ರ ಹೊತ್ತಿಗೆ ಆ ಸ್ನೇಹ ಬತ್ತಿಹೋಗಿ ದ್ವೇಷವಾಗಿ ಪರಿಣಮಿಸಿತು. ಅದಕ್ಕೆ ಮುಖ್ಯ ಕಾರಣ, ಸೋವಿಯೆತ್ ದೇಶವನ್ನೂ ಮೀರಿಸುವ ಅವರ ಕೀರ್ತಿಯ ಹಂಬಲ.

ಮಾವೋ ಅವರಿಗೆ ತಾಯಿಯಲ್ಲಿ ಅಪಾರ ಗೌರವ. ತಮ್ಮ ತಾಯಿಯನ್ನು ನೆನೆದು ಅವರು ರಚಿಸಿದ ಒಂದು ಕವನದ ಸಾರಾಂಶ ಹೀಗಿದೆ:

### ಮಾತೃ ಸ್ಮರಣೆ

ನನ್ನ ತಾಯಿಯ ಗುಣಗಳಲ್ಲಿ ಸೇವಾನಿಷ್ಠ ಪ್ರೀತಿಗೇ ಅಗ್ರಸ್ಥಾನ.
ದೂರದವರು ಹತ್ತಿರದವರು ಎಲ್ಲರೂ ಸಮ ಆ ಪ್ರೀತಿಗೆ!
ಅವಳ ಹೃದಯವಂತಿಕೆ, ಪ್ರೀತಿಯ ಅರಿವು, ಕೋಮಲ ಭಾವನೆ
ಎಲ್ಲವೂ ಆಕರ್ಷಕ.
ಆಕೆಯ ಪ್ರೀತಿಯ ಮೂಲ, ನಿಷ್ಕಪಟ ಪ್ರಾಮಾಣಿಕತೆ.
ಆ ಪ್ರೀತಿಯಲಿ ಮೋಸವಿರಲಿಲ್ಲ, ಸುಳ್ಳಿರಲಿಲ್ಲ.
ಆಕೆಯ ಮನವು ಸುಸಂಸ್ಕೃತ, ನಿಯತಿಯುತ.

ಆಕೆಯು ಯೋಜನೆ ಕ್ರಮಬದ್ಧ, ಸದಾ ಎಚ್ಚರ.
ನಾನು ರೋಗಗ್ರಸ್ತನಾದಾಗ, ಪ್ರೀತಿ ತುಂಬಿದ ಹೃದಯದಿಂದ,
ಎಚ್ಚರದ ಆತ್ಮದಿಂದ, ನನ್ನ ಕೈಗಳ ಸವರಿದಳು.
ಈ ಕವನವ ಏಕೆ ರಚಿಸಿದೆ?- ಎಂದು ಕೇಳಬಹುದು ನೀವು.
ಸರ್ವರೂ ಹೃದಯವಂತರಾಗಿ, ಮಾನವಶ್ರೇಷ್ಠರಾಗಲೆಂಬುದೇ
ಈ ಕವನದ ಉದ್ದೇಶ !

ಈ ಕವನದಲ್ಲಿ ಮಾವೋ ಅವರ ಮಾತೃಪ್ರೇಮ ಸುಪ್ರಕಟ ಅವರ ವ್ಯಕ್ತಿತ್ವವನ್ನು ತಿಳಿಯಲು ಮುಂದೆ ಕೊಟ್ಟಿರುವ ಅವರ ಕೆಲವು ಉಕ್ತಿಗಳು ಸಹಾಯ ಮಾಡುತ್ತವೆ.

"ಕ್ರಾಂತಿ ಎಂಬುದು ಭೋಜನಕೂಟವಲ್ಲ, ಪ್ರಬಂಧರಚನೆಯಲ್ಲ, ವರ್ಣಚಿತ್ರ ಬರೆಯುವಂತಲ್ಲ, ಕಸೂತಿ ಕೆಲಸವಲ್ಲ. ಅದರಲ್ಲಿ ನಾಜೂಕಿಲ್ಲ. ಅದು ಸಾವಕಾಶವಾದ, ಸೌಮ್ಯವಾದ, ಮೃದುವಾದ, ವಿನೀತವಾದ, ನಿಗ್ರಹಾತ್ಮಕವಾದ, ಉದಾರವಾದ ಕಾರ್ಯವಲ್ಲ. ಕ್ರಾಂತಿಯು ಬಂಡಾಯ. ಅದು ಒಂದು ವರ್ಗವನ್ನು ಉರುಳಿಸಿ ಮತ್ತೊಂದು ವರ್ಗವನ್ನು ಸ್ಥಾಪನೆ ಮಾಡುವ ಬಲಪ್ರಯೋಗ."

* * *

"ಕ್ರಾಂತಿ ಹಾಗೂ ಕ್ರಾಂತಿಯುತ ಯುದ್ಧಗಳು ವರ್ಗಪೂರ್ಣ ಸಮಾಜದಲ್ಲಿ ಅನಿವಾರ್ಯ. ಅವುಗಳಿಲ್ಲದೆ ಸಾಮಾಜಿಕ ಮುನ್ನಡೆ ಸಾಧ್ಯವಿಲ್ಲ. ಅವುಗಳಿಲ್ಲದೆ ಪ್ರಗತಿವಿರೋಧಿ ಆಡಳಿತವನ್ನು ತೆಗೆದೆಸೆದು ರಾಜಕೀಯ ಶಕ್ತಿಯನ್ನು ಜನರು ಪಡೆಯುವುದು ಅಸಾಧ್ಯ"

* * *

"ರಾಜಕೀಯ ಶಕ್ತಿ ಬೆಳೆಯುವುದು ಬಂದೂಕಿನ ಶಕ್ತಿಯಿಂದಲೆ" ಎಂಬ ಸತ್ಯವನ್ನು ಎಲ್ಲ ಕಮ್ಯುನಿಸ್ಟರೂ ತಿಳಿದಿರಬೇಕು.

* * *

"ಯುದ್ಧವನ್ನು ತೊಡೆದುಹಾಕುವುದನ್ನೇ ನಾವು ಸಮರ್ಥಿಸುತ್ತೇವೆ. ನಮಗೆ ಯುದ್ಧ ಬೇಡ. ಆದರೆ ಯುದ್ಧವನ್ನು ಯುದ್ಧದಿಂದಲೇ ತೊಡೆದುಹಾಕಬೇಕು. ಬಂದೂಕುಗಳನ್ನು ದೂರ ಮಾಡಲು ಬಂದೂಕುಗಳನ್ನು ಕೈಗೆತ್ತಿಕೊಳ್ಳಬೇಕಾದುದು ಅವಶ್ಯಕ"

* * *

"ಪ್ರಗತಿ ವಿರೋಧಿಗಳೆಲ್ಲ ಕಾಗದದ ಹುಲಿಗಳು. ಅವರ ಹೊರ ರೂಪ ಭಯಂಕರ, ಆದರೆ ನಿಜವಾಗಿ ಅವರು ಅಷ್ಟು ಶಕ್ತರಲ್ಲ. ವಿಚಾರಮಾಡಿ ನೋಡಿದಾಗ, ಜನತೆಯೇ ಶಕ್ತಿಪೂರ್ಣ, ಪ್ರಗತಿ ವಿರೋಧಿಗಳಲ್ಲ."

* * *

"ಕಡಿಮೆ ಸಂಖ್ಯೆಯ ದಕ್ಷ ಸೈನ್ಯ ಮತ್ತು ಸರಳವಾದ ಆಡಳಿತ ಕ್ರಮ" ಆವಶ್ಯಕ. ಭಾಷಣ, ಲೇಖನ, ನಿರ್ಣಯ ಹಿತಮಿತವಾಗಿರಬೇಕು. ಇವೆಲ್ಲ ವಿಷಯದ ನೇರ ಪ್ರತಿಪಾದನೆಯನ್ನೇ ಮಾಡಬೇಕು. ಸಭೆಗಳು ಅತಿ ದೀರ್ಘಕಾಲ ನಡೆಯಬಾರದು."

* * *

"ಸೈನ್ಯವು ಜನತೆಯೊಡನೆ ಒಂದಾಗಬೇಕು. ಆಗ ಜನತೆ, ಸೈನ್ಯವನ್ನು ತಮ್ಮದೆಂದೇ ಭಾವಿಸುತ್ತಾರೆ. ಅಂಥ ಸೈನ್ಯ ಅಜೇಯ."

* * *

"ನಾವು ವಿನಯಶೀಲರೂ ವಿವೇಕಿಗಳೂ ಆಗಿ ದುರಹಂಕಾರ ಮತ್ತು ಮುಂದಾಲೋಚನೆ ಇಲ್ಲದೆ ಮಾಡುವ ಕೆಲಸಗಳನ್ನು

ನಿಗ್ರಹಿಸಬೇಕು, ನಾವೆಲ್ಲರೂ ಆತ್ಮಪೂರ್ವಕವಾಗಿ ಹೃದಯ ಪೂರ್ವಕವಾಗಿ ಚೀಣೀ ಜನತೆಯ ಸೇವೆ ಮಾಡಬೇಕು."

* * *

"ಸಹಸ್ರಾರು ದೇಶಭಕ್ತರು ಹುತಾತ್ಮರಾಗಿ ವೀರ ಮರಣ ವನ್ನಪ್ಪಿದುದು ಜನತೆಯ ಉದ್ಧಾರಕ್ಕಾಗಿ. ಅವರು ಎತ್ತಿದ ವೀರ ಧ್ವಜವನ್ನು ಮತ್ತಷ್ಟು ಮೇಲೆತ್ತಿ ಹಿಡಿದು, ಅವರ ರಕ್ತ ದಿಂದ ಕೆಂಪಾದ ವೀರಮಾರ್ಗದಲ್ಲಿ ಮುನ್ನಡೆಯೋಣ."

* * *

"ನಮ್ಮ ಸರ್ಕಾರದ ವೆಚ್ಚದ ವಿಭಾಗದಲ್ಲಿ, ಮಿತವ್ಯಯವೇ ಮಾರ್ಗದರ್ಶಿ ತತ್ತ್ವವಾಗಬೇಕು. ಭ್ರಷ್ಟಾಚಾರ ಮತ್ತು ದುಂದುವೆಚ್ಚಗಳು ಭಯಂಕರ ಅಪರಾಧವೆಂಬುದನ್ನು ಸರ್ಕಾರದ ಉದ್ಯೋಗಿಗಳಿಗೆ ಸ್ಪಷ್ಟಪಡಿಸಬೇಕು. ಭ್ರಷ್ಟಾಚಾರ ಮತ್ತು ದುಂದುವೆಚ್ಚಗಳ ವಿರುದ್ಧ ನಮ್ಮ ಚಳವಳಿ, ಈಗಾಗಲೆ ಸಾಕಷ್ಟು ಉತ್ತಮ ಫಲಿತಾಂಶವನ್ನು ನೀಡಿದೆ. ಹಣಕಾಸಿನ ವ್ಯವಸ್ಥೆಯಲ್ಲಿ ಪ್ರತಿ ಬಿಡಿ ಪೈಸೆಯನ್ನು ಯುದ್ಧ, ಕ್ರಾಂತಿ ಮತ್ತು ಆರ್ಥಿಕಾಭಿ ವೃದ್ಧಿಗಳಿಗಾಗಿ ಉಳಿಸಬೇಕೆಂಬ ತತ್ತ್ವ ಮಾರ್ಗದರ್ಶಿಯಾಗ ಬೇಕು."

* * *

ನವಚೀಣಾದ ಬಹುಪಾಲು ಜನರು ಮಾವೋ ಅವರನ್ನು ಗುರು, ರಾಜಕಾರಣಿ. ತತ್ತ್ವಜ್ಞಾನಿ, ಕವಿ, ರಾಷ್ಟ್ರವೀರ, ಮಹಾ ಪುರುಷ—ಎಂದು ಗೌರವಿಸುತ್ತಾರೆ.

## ೯. ನವಚೀಣಾದ ಸಾಧನೆಗಳು

ಮಾವೋ ಅವರ ಮಾರ್ಗದರ್ಶನದಲ್ಲಿ ಚೀಣಾ ಹಲವು ಕ್ಷೇತ್ರಗಳಲ್ಲಿ ಪ್ರಗತಿಯನ್ನು ಸಾಧಿಸಿತು. ಪ್ರಾರಂಭದಲ್ಲಿ ಅವರು ಯುಕ್ತ ರೀತಿಯಲ್ಲಿ ಯೋಜನೆಗಳನ್ನು ಸಿದ್ಧಿಸದೆ ಹೋದುದರಿಂದ, ಕೆಲವು ಸಂದರ್ಭಗಳಲ್ಲಿ ಅವರ ಯೋಜನೆ ಸೂಕ್ತ ಪ್ರತಿಫಲಗಳನ್ನು ಕೊಡದೆ ಹೋದುದೂ ಉಂಟು. ಒಟ್ಟಿನಲ್ಲಿ ಅವರ ದಿಗ್ದರ್ಶನದಲ್ಲಿ ಚೀಣಾ ಪ್ರಗತಿಯನ್ನು ಸಾಧಿಸಿತೆಂದು ಹೇಳಬಹುದು.

### ವಿದ್ಯಾಭ್ಯಾಸ

ನವಚೀಣಾದಲ್ಲಿ ವಿದ್ಯಾಭ್ಯಾಸ ಶೈಶವಾವಸ್ಥೆಯಲ್ಲಿಯೇ ಆರಂಭವಾಗುತ್ತದೆ. ಶಿಶುಗಳು ಮೊದಲವರ್ಷದಿಂದ ಮೂರನೇ ವರ್ಷದ ವರೆಗೆ ಕ್ರೆಚೆ ಅಥವಾ ಶಿಶುವಿಹಾರಗಳಲ್ಲಿ ಬೆಳೆಯುತ್ತಾರೆ. ತಾಯಂದಿರು ಕೆಲಸಕ್ಕೆ ಹೋಗುವ ಮೊದಲು ಶಿಶುಗಳನ್ನು ಶಿಶುವಿಹಾರಗಳಲ್ಲಿ ಬಿಟ್ಟು ಹೋಗುವರು. ಕೆಲಸದಿಂದ ಹಿಂತಿರುಗುವಾಗ ತಮ್ಮ ಶಿಶುಗಳನ್ನು ಮನೆಗೆ ಕರೆದುಕೊಂಡು ಹೋಗುತ್ತಾರೆ. ಶಿಶುಗಳ ಸಂಪೂರ್ಣ ಸಂರಕ್ಷಣೆಯನ್ನು ಮಾಡುವ ಶಿಶುವಿಹಾರಗಳಿವೆ ಚೀಣಾದಲ್ಲಿ. ಶಿಶುಗಳ ಪೋಷಣೆಗೂ ಆರೋಗ್ಯಕ್ಕೂ ಹೆಚ್ಚಿನ ಗಮನವಿದೆ ಶಿಶುವಿಹಾರಗಳಲ್ಲಿ. ಇಂದು ಚೀಣಾದಲ್ಲಿ ನಡೆಯುವ ವಿದ್ಯಾಭ್ಯಾಸದ ಹಂತಗಳನ್ನು ಮುಂದೆ ನಿರೂಪಿಸಿದೆ :

1. 1 ರಿಂದ 3 ರ ವರೆಗೆ — ಶಿಶುವಿಹಾರಗಳಲ್ಲಿ ಶಿಕ್ಷಣ
2. 3 ರಿಂದ 6 ರ ವರೆಗೆ — ಬಾಲವಿಹಾರಗಳಲ್ಲಿ ಶಿಕ್ಷಣ
3. 6 ರಿಂದ 12 ರ ವರೆಗೆ — ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಣ
4. 12 ರಿಂದ 17ರ ವರೆಗೆ — ಪ್ರೌಢಶಾಲೆಗಳಲ್ಲಿ ಶಿಕ್ಷಣ

5. 17 ರಿಂದ 21 ರ ವರೆಗೆ — ಸ್ನಾತಕ ಶಿಕ್ಷಣ
6. 17 ರಿಂದ 22 ರವರೆಗೆ — ವೈದ್ಯಕೀಯ ಅಥವಾ ಎಂಜಿನಿಯರಿಂಗ್ ಶಿಕ್ಷಣ
7, 21 ರಿಂದ 24 ರವರೆಗೆ — ಸ್ನಾತಕೋತ್ತರ ಶಿಕ್ಷಣ

ಚೀಣಾದೇಶದ ವಿದ್ಯಾಭ್ಯಾಸದ ಎಲ್ಲ ಹಂತಗಳಲ್ಲಿ ಕಾಯಕವು ಕಡ್ಡಾಯ. ಖಾಸಗಿಯವರು ನಡೆಸುತ್ತಿದ್ದ ಸಾವಿರಾರು ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢ ಶಿಕ್ಷಣ ಶಾಲೆಗಳನ್ನೂ, ಇಪ್ಪತ್ತು ವಿಶ್ವವಿದ್ಯಾನಿಲಯಗಳನ್ನೂ ಸರ್ಕಾರ ಸಂಪೂರ್ಣವಾಗಿ ಕೈವಶ ಮಾಡಿಕೊಂಡು ತಾನೇ ನಡೆಸುತ್ತಿದೆ. ಕೇವಲ ಭೂಷಣಕ್ಕಾಗಿ ಅಧ್ಯಯನಕ್ಕೆ ಬದಲಾಗಿ ರಾಷ್ಟ್ರದ ಹಿತಕ್ಕಾಗಿರುವ ಶಿಕ್ಷಣಕ್ಕೇ ಚೀಣಾದಲ್ಲಿ ಮಾನ್ಯತೆ. ಶಾಲಾಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಕೃಷಿ ಮತ್ತು ಕೈಗಾರಿಕೆಗಳಲ್ಲಿಯೂ ಸ್ವಲ್ಪ ಶಿಕ್ಷಣ ದೊರಕುತ್ತದೆ. ಶಾಲೆಗಳು ಆರಂಭವಾಗುವುದು ಬೆಳಗ್ಗೆ ಎಂಟು ಗಂಟೆಗೆ. ವಿದ್ಯಾರ್ಥಿಗಳು ಶಾಲೆಗೆ ಬಂದೊಡನೆ ಶಾಲೆಯನ್ನು ಗುಡಿಸಿ, ಒರೆಸಿ, ಶುದ್ಧ ಮಾಡಿ, ಅನಂತರ ಅಧ್ಯಯನದಲ್ಲಿ ತೊಡಗುತ್ತಾರೆ. ಶಾಲೆಯ ಆವರಣವನ್ನು ನಿರ್ಮಲವಾಗಿಡುವವರೂ ವಿದ್ಯಾರ್ಥಿಗಳೇ. ಮಕ್ಕಳ ವಿಕಾಸಕ್ಕಾಗಿ ಮಕ್ಕಳ ಸಾಂಸ್ಕೃತಿಕ ಭವನಗಳಿವೆ. ಈ ಭವನಗಳಲ್ಲಿ ಮಕ್ಕಳಿಗೆ ಸಂಗೀತದಲ್ಲಿ ಶಿಕ್ಷಣ, ಟ್ರಾನ್ಸಿಸ್ಟರ್ ಹಾಗೂ ಇತರ ಯಂತ್ರ ಜೋಡಣೆಯಲ್ಲಿ ತರಬೇತಿ, ಅಕ್ಯುಪಂಕ್ಚರ್ ಶಿಕ್ಷಣ, ಕ್ರೀಡೆಗಳಲ್ಲಿ ತರಬೇತಿ, ಚಿತ್ರಕಲೆಯಲ್ಲಿ ಶಿಕ್ಷಣ— ಈ ಸೌಲಭ್ಯಗಳಿವೆ. ಉತ್ತಮ ಪುಸ್ತಕ ಭಂಡಾರಗಳ ಸೌಲಭ್ಯವೂ ಇಲ್ಲಿರುತ್ತದೆ. ಮಕ್ಕಳ ಯೋಗಕ್ಷೇಮಕ್ಕೆ ಹೆಚ್ಚಿನ ಗಮನವಿತ್ತಿರುವುದರಿಂದ ನವಚೀಣಾದಲ್ಲಿ ಮಕ್ಕಳು ಆರೋಗ್ಯವಾಗಿಯೂ ಸಂತೋಷವಾಗಿಯೂ ಇರುತ್ತಾರೆ. ಜನರು ನೈತಿಕವಾಗಿ, ಭೌತಿಕ

ವಾಗಿ, ದೈಹಿಕವಾಗಿ, ಬೌದ್ಧಿಕವಾಗಿ ವಿಕಾಸಹೊಂದಿ ಸಮಾಜ ವಾದದ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ವಿದ್ಯಾಭ್ಯಾಸ ಸಹಾಯ ಮಾಡಬೇಕೆಂಬುದು ಮಾವೋ ಅವರ ಆದರ್ಶವಾಗಿತ್ತು. ಈಗ ಚೀಣಾದ ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರಲ್ಲಿ ರಾಷ್ಟ್ರದ ಅಭ್ಯುದಯವಾಗಬೇಕೆಂಬ ಕಳಕಳಿ ಇದೆ.

## ಕಮ್ಯೂನ್‌ಗಳು

ಚೀಣಾದಲ್ಲಿ ೧೯೪೯ ಕ್ಕಿಂತ ಹಿಂದೆ ಶ್ರೀಮಂತ ಜಮೀನ್ದಾರರು ಬಡ ರೈತರನ್ನು ಶೋಷಣೆ ಮಾಡಿ, ತಾವು ಮಾತ್ರ ಮೋಜಿನ ಜೀವನ ನಡೆಸುತ್ತಿದ್ದರು. ಅವರು ಬಡ ರೈತರ ಸುಂದರ ಪತ್ನಿಯ ರನ್ನು ತಮ್ಮ ಉಪಪತ್ನಿಯರನ್ನಾಗಿ ಮಾಡಿಕೊಳ್ಳಲೂ ಹೇಸುತ್ತಿರ ಲಿಲ್ಲ. ಅವರ ಕಾಮಕ್ಕೆ ತುತ್ತಾದ ಅನೇಕ ಸುಂದರಿಯರು ಪಡ ಬಾರದ ಕಷ್ಟಗಳನ್ನು ಅನುಭವಿಸುತ್ತಿದ್ದರು. ಬಡರೈತರು ಶ್ರೀಮಂತ ಜಮೀನ್ದಾರರ ದಬ್ಬಾಳಿಕೆಗೆ ಸಿಕ್ಕಿ ಹತಚೇತಸರಾಗಿದ್ದರು. ರಾಷ್ಟ್ರದಲ್ಲಿ ಆಹಾರದ ಅಭಾವವಿತ್ತು.

ಮಾವೋ ಪ್ರಾರಂಭದಲ್ಲಿ ಉಳುವವರಿಗೇ ಭೂಮಿ ಎಂದು ಘೋಷಿಸಿ, ರೈತರೇ ಭೂಮಿಯ ಮಾಲೀಕರಾಗುವಂತೆ ಮಾಡಿ ದರು. ಅನಂತರ ಕೃಷಿಕ್ಷೇತ್ರದಲ್ಲಿ ಸಹಕಾರ ಪದ್ಧತಿ ರೂಪಿತ ವಾಯಿತು. ಈ ಪದ್ಧತಿಯನ್ನು ವಿರೋಧಿಸಿದ ಲಕ್ಷಾಂತರ ಜಮೀನುದಾರರು ಗುಂಡಿನ ಬಾಯಿಗೆ ಸಿಕ್ಕಿ ಸತ್ತರು. ಕ್ರಮೇಣ ಮಾವೋ 'ಕಮ್ಯೂನ್' ಪದ್ಧತಿಯನ್ನು ಕಾರ್ಯರೂಪಕ್ಕೆ ತಂದರು. ಸುಮಾರು ಇಪ್ಪತ್ತು ಸಾವಿರ ರೈತರಿರುವ ಹಳ್ಳಿಗಳು ಸೇರಿ ಒಂದು ಕಮ್ಯೂನ್ ಆಗುತ್ತದೆ. ವ್ಯವಸಾಯ, ವಾಣಿಜ್ಯ, ಕೈಗಾರಿಕೆ, ವಿದ್ಯಾಭ್ಯಾಸ, ರಕ್ಷಣೆ–ಇವೆಲ್ಲವೂ ಕಮ್ಯೂನಿನಲ್ಲಿ ನಡೆವ ಕೆಲಸ

ಕಾರ್ಯಗಳು. ಕಮ್ಯೂನ್ ಎಂಬುದು ಆಡಳಿತ ವ್ಯವಸ್ಥೆಯ ಒಂದು ಘಟಕ. ಇಂದು ಚೀಣಾದಲ್ಲಿ ಸುಮಾರು ಐವತ್ತೈದು ಸಾವಿರ ಕಮ್ಯೂನ್‌ಗಳಿವೆ. ರಾಷ್ಟ್ರಕ್ಕೆ ಬೇಕಾದ ಆಹಾರದ ಉತ್ಪಾದನೆ ಈ ಕಮ್ಯೂನ್‌ಗಳಿಂದಲೇ, ಚೀಣಾ ಆಹಾರದಲ್ಲಿ ಇಂದು ಸ್ವಯಂ ಪರಿಪೂರ್ಣ. ಕೃಷಿ ಕ್ಷೇತ್ರದಲ್ಲಿ ಆಧುನಿಕ ಯಂತ್ರಗಳು ಬಳಕೆಗೆ ಬಂದಿವೆ. ಒಂದು ಕಮ್ಯೂನನ್ನು ತೆಗೆದುಕೊಂಡರೆ ಅದರ ಕೇಂದ್ರ ಒಂದು ಸ್ಥಳದಲ್ಲಿರುತ್ತದೆ. ಉತ್ಪಾದನಾ ಘಟಕಗಳು (ಪ್ರೊಡಕ್ಷನ್ ಬ್ರಿಗೇಡ್‌ಗಳು) ಬೇರೆ ಬೇರೆ ಕಡೆಗಳಲ್ಲಿರುತ್ತವೆ. ಕಮ್ಯೂನಿನ ಕೇಂದ್ರದಲ್ಲಿ ಕೈಗಾರಿಕಾ ಕೇಂದ್ರಗಳೂ ಇತರ ಘಟಕಗಳೂ ಕೆಲಸ ಮಾಡುತ್ತವೆ. ಉತ್ಪಾದನಾ ಘಟಕಗಳಲ್ಲಿ ವ್ಯವಸ್ಥಿತ ರೈತ ಗೃಹಗಳಿರುತ್ತವೆ, ಶಾಲೆಗಳಿರುತ್ತವೆ. ಪ್ರಾರಂಭದಲ್ಲಿ ಕಮ್ಯೂನ್‌ಗಳನ್ನು ರೂಪಿಸುವುದು ಸರ್ಕಾರಕ್ಕೆ ಕಷ್ಟವಾಯಿತು. ಪ್ರಾರಂಭದಲ್ಲಿದ್ದ ಅವ್ಯವಸ್ಥೆ ಈಗಿಲ್ಲ. ಇಂದು ಚೀಣಾದ ಈ ಪ್ರದೇಶಗಳ ರಸ್ತೆಗಳಲ್ಲಾಗಲಿ, ಹೊಲಗಳಲ್ಲಾಗಲಿ ಕಳೆಯು ಕಾಣಿಸುವುದಿಲ್ಲ, ರಸ್ತೆಗಳ ಪಕ್ಕಗಳಲ್ಲಿ ಉಪಯುಕ್ತವಾದ ಮರಗಳನ್ನು ಬೆಳೆಸಿ ಸುಂದರವಾಗಿಟ್ಟಿದ್ದಾರೆ. ನೈರ್ಮಲ್ಯಕ್ಕೆ ಕಮ್ಯೂನ್‌ಗಳಲ್ಲಿ ವಿಶೇಷ ಗಮನ.

ಕಮ್ಯೂನ್‌ಗಳ ಉತ್ಪಾದನ ಘಟಕಗಳಲ್ಲಿ ವಾಸ ಮಾಡುವ ಎಲ್ಲ ರೈತರಿಗೂ ವಸತಿ ಸೌಕರ್ಯಗಳಿವೆ. ಅವರು ತಮ್ಮ ಭೋಜನ ಮತ್ತು ಉಪಾಹಾರಗಳಿಗೆ ಉಪಾಹಾರ ಗೃಹಗಳಿಗೇ ಹೋಗುತ್ತಾರೆ. ಪುರುಷರೂ ಸ್ತ್ರೀಯರೂ ಕೆಲಸ ಮಾಡುತ್ತಾರೆ. ಶಿಶು ವಿಹಾರ, ಬಾಲವಿಹಾರ ಹಾಗೂ ಪ್ರೌಢಶಾಲೆಗಳ ಸೌಲಭ್ಯ ಕಮ್ಯೂನ್‌ಗಳಲ್ಲಿರುತ್ತವೆ. ಕಮ್ಯೂನಿನ ಘಟಕಗಳಲ್ಲಿ ಬೆಳಿಗ್ಗೆ ಧ್ವನಿವರ್ಧಕದ ಕರೆಗೆ ಎದ್ದು ರೈತರು ಕೆಲಸಕ್ಕೆ ಸಿದ್ಧರಾಗುವರು,

ಅನಂತರ ಎಲ್ಲರಿಗೂ ವ್ಯಾಯಾಮ ಕಡ್ಡಾಯ, ಅನಂತರ ಎಲ್ಲರಿಗೂ ಉಪಾಹಾರ ಗೃಹಗಳಲ್ಲಿ ಉಪಾಹಾರ, ಬಳಿಕ ಎಲ್ಲರೂ ತಮ್ಮ ತಮ್ಮ ಕೆಲಸಗಳಿಗೆ ಹೋಗುತ್ತಾರೆ. ಕೆಲಸದ ಸ್ಥಳ ದೂರವಾಗಿದ್ದರೆ, ಅವರನ್ನು ಕರೆದೊಯ್ಯಲು ವಾಹನಸೌಲಭ್ಯ ದೊರಕುತ್ತದೆ. ಮಧ್ಯಾಹ್ನ ಸರಳವಾದರೂ ಪುಷ್ಟಿಕರ ಆಹಾರದಿಂದ ಕೂಡಿದ ಭೋಜನ ವ್ಯವಸ್ಥೆ. ದೂರದಲ್ಲಿ ಕೆಲಸ ಮಾಡುವವರಿಗೆ ಊಟವನ್ನು ಅವರು ಕೆಲಸ ಮಾಡುವ ಕಡೆಗೆ ತೆಗೆದುಕೊಂಡು ಹೋಗಿ ಕೊಡುವ ವ್ಯವಸ್ಥೆ ಇದೆ. ಎಂಟು ಗಂಟೆಗಳ ಕೆಲಸವಾದ ಬಳಿಕ ಕೆಲಸಗಾರರು ತಮ್ಮ ವಸತಿಗೆ ಹಿಂತಿರುಗುತ್ತಾರೆ. ಸಂಜೆಯ ಸಮಯದಲ್ಲಿ ಬಾನುಲಿ ಹಾಗೂ ಚಲನಚಿತ್ರಗಳ ಸೌಲಭ್ಯಗಳಿರುತ್ತವೆ. ರಾತ್ರಿಯ ವೇಳೆಯಲ್ಲಿ ಸರ್ಕಾರದ ವೃತ್ತಾಂತವನ್ನೂ ಅಭಿವೃದ್ಧಿಯನ್ನು ಸಾಧಿಸುವುದಕ್ಕಾಗಿ ಸಲಹೆಗಳನ್ನೂ ತಿಳಿಸುವ ವ್ಯವಸ್ಥೆ ಇದೆ. ರಜಾದಿನಗಳಲ್ಲಿ ರೈತರೂ ಕಾರ್ಮಿಕರೂ ತಮ್ಮ ತಮ್ಮ ಕೆಲಸಗಳನ್ನು ಮಾಡಿಕೊಳ್ಳುತ್ತಾರೆ. ರಜಾ ದಿನಗಳಲ್ಲಿ ವಿಶ್ರಾಂತಿ ಪಡೆಯಲು ಅಥವಾ ತಮಗೆ ಬೇಕಾದವರನ್ನು ಕಾಣಲು ಅವರಿಗೆ ಅವಕಾಶವಿರುತ್ತದೆ. ಕಮ್ಯೂನಿನಲ್ಲಿ ವಾಸಿಸುವವರಿಗೆ ಹದಿನಾರು ರೀತಿಯ ಸೌಲಭ್ಯಗಳನ್ನು ಸರ್ಕಾರವೇ ಒದಗಿಸುತ್ತದೆ. ಅವುಗಳ ವಿವರ ಹೀಗಿದೆ :

೧. ಆಹಾರ

೨. ಬಟ್ಟೆ

೩. ಉಚಿತ ಹೊಲಿಗೆ

೪. ವಸತಿ

೫. ವೈದ್ಯಕೀಯ ಚಿಕಿತ್ಸೆ ಮತ್ತು ಅನಾರೋಗ್ಯವಾದಾಗ ರಜಾ

೬. ಗರ್ಭಿಣಿಯರಿಗೆ ವೈದ್ಯಕೀಯ ಚಿಕಿತ್ಸೆ ಮತ್ತು ರಜಾ
೭. ಅತಿಥಿಗೃಹದ ಸೌಲಭ್ಯ
೮. ಉಚಿತ ಶಿಕ್ಷಣ
೯. ಮಕ್ಕಳ ಉಚಿತ ಪೋಷಣೆ
೧೦. ಉಚಿತ ದೀಪ
೧೧. ಕ್ರಾಪ್‌ಕಟ್ ಸೌಲಭ್ಯ
೧೨. ಬಿಸಿ ನೀರಿನ ಸ್ನಾನದ ವ್ಯವಸ್ಥೆ
೧೩. ಉಚಿತ ಮನರಂಜನೆಯ ಸೌಲಭ್ಯ
೧೪. ವಿವಾಹ ಸಮಯದಲ್ಲಿ ಬೇಕಾಗುವ ಸೌಲಭ್ಯಗಳು
೧೫. ವೃದ್ಧಾಪ್ಯದಲ್ಲಿ ರಕ್ಷಣೆ
೧೬. ಸತ್ತಾಗ ಅಂತ್ಯಸಂಸ್ಕಾರ

ಈ ಸೌಲಭ್ಯಗಳು ಕಮ್ಯೂನಿನಲ್ಲಿ ವಾಸ ಮಾಡುವ ಎಲ್ಲರಿಗೂ ದೊರಕುತ್ತದೆ. ಪ್ರಾರಂಭದಲ್ಲಿ ಜನರಿಗೆ ತಾವು ಯಂತ್ರದಂತಾದೆ ವೆಂಬ ಅತೃಪ್ತಿ ಇದ್ದರೂ ಕ್ರಮೇಣ ವ್ಯವಸ್ಥಿತ ಸಾಮಾಜಿಕ ಜೀವನ ಅವರಿಗೆ ಪ್ರಿಯವಾಗುತ್ತ ಬಂದಿತು. ಪ್ರಪಂಚದಲ್ಲಿ ಅತಿ ಹೆಚ್ಚಿನ ಜನಸಂಖ್ಯೆಯಿಂದ ಕೂಡಿ ಹಿಂದುಳಿದ ದೇಶವಾದ ಚೀಣಾ ಇಂದು ದಾರಿದ್ರ್ಯ ಹಾಗೂ ರೋಗರುಜಿನಗಳ ದವಡೆಯಿಂದ ಪಾರಾಗಿ ಸ್ವಾವಲಂಬಿ ರಾಷ್ಟ್ರವಾಗಿದೆ. ಪ್ರಗತಿಶೀಲವಾಗಿ ಮುಂದುವರಿದ ಚೀಣಾ ಇಂದು ಕೃಷಿಯಲ್ಲಿ ಸ್ವಯಂ ಪರಿಪೂರ್ಣತೆಯನ್ನು ಸಾಧಿಸಿದೆ. ಅಲ್ಲಿಯ ಮುಖ್ಯ ಬೆಳೆ ಬತ್ತ ಮತ್ತು ಗೋಧಿ. ತರಕಾರಿ ಗಳನ್ನು ಯಥೇಚ್ಛವಾಗಿ ಬೆಳೆಯುತ್ತಾರೆ. ಅರಣ್ಯಗಳು ವ್ಯವಸ್ಥಿತ ವಾಗಿ ಬೆಳೆದಿವೆ.

## ಆರೋಗ್ಯ ಮತ್ತು ಕುಟುಂಬ ಯೋಜನೆ

ಚೀಣಾದಲ್ಲಿ ರೋಗ ನಿರೋಧಕ್ಕೇ ಹೆಚ್ಚಿನ ಗಮನ. ನಗರ ಹಾಗೂ ಗ್ರಾಮಗಳಲ್ಲಿ ನೈರ್ಮಲ್ಯಕ್ಕೆ ಸರ್ಕಾರ ವಿಶೇಷ ಗಮನವಿತ್ತಿರುವುದರಿಂದ ಸಾಂಕ್ರಾಮಿಕ ರೋಗಗಳು ಹರಡದಂತಾಗಿದೆ. ಆಹಾರ ಪೋಷಣೆಗೆ ಸರ್ಕಾರ ಪ್ರಾಮುಖ್ಯತೆಯನ್ನು ನೀಡಿರುವುದರಿಂದ ಜನರು ಆರೋಗ್ಯವಾಗಿದ್ದಾರೆ. ಶಾಲಾ ಕಾಲೇಜುಗಳಲ್ಲಿ ಹಾಗೂ ಕಮ್ಯೂನಿನ ಜನರಿಗೆ ವ್ಯಾಯಾಮ ಕಡ್ಡಾಯವಾಗಿರುವುದರಿಂದ ವಿದ್ಯಾರ್ಥಿಗಳೂ ಜನರೂ ಆರೋಗ್ಯವಾಗಿದ್ದಾರೆ.

ವೈದ್ಯಕೀಯ ಶಿಕ್ಷಣ ಜನಸಾಮಾನ್ಯರಿಗೂ ದೊರಕುವಂತೆ ಮಾಡಿದ ಯಶಸ್ಸು ನವಚೀಣಾದ್ದು. ಗ್ರಾಮ ಮತ್ತು ನಗರಗಳಲ್ಲಿ ವೈದ್ಯಕೀಯ ಸೇವೆ ಮಾಡಬೇಕೆಂಬ ಆಸಕ್ತಿಯುಳ್ಳವರನ್ನು ಆಯ್ಕೆ ಮಾಡಿ, ಕೇವಲ ಕೆಲವೇ ತಿಂಗಳ ಕಾಲ ಅವರಿಗೆ ಶಿಕ್ಷಣ ನೀಡಿ, ಅವರನ್ನು ಜನತಾ ವೈದ್ಯಕೀಯ ಸೇವೆಯಲ್ಲಿ ತೊಡಗಿಸಿರುವುದು ನವಚೀಣಾದ ನೂತನ ಮಾರ್ಗ. ಈ ವೈದ್ಯರಿಂದ ಜನತೆಗೆ ಮಹದುಪಕಾರವಾಗಿದೆ. ಜನತಾ ವೈದ್ಯರು ಹೆಚ್ಚಿನ ಶಿಕ್ಷಣ ಪಡೆಯಲು ಉತ್ಸುಕರಾದರೆ, ಅವರು ವೈದ್ಯಕೀಯ ಕಾಲೇಜುಗಳಿಗೆ ಸೇರಲೂ ಅವಕಾಶವಿದೆ. ವಿದ್ಯಾರ್ಥಿಗಳು ವೈದ್ಯಕೀಯ ಕಾಲೇಜುಗಳಿಗೆ ಸೇರಬೇಕಾದರೆ, ಅವರು ಎರಡು ವರ್ಷಗಳ ಕಾಲ ಗ್ರಾಮಾಂತರ ಪ್ರದೇಶಗಳಲ್ಲಿ ಸೇವೆ ಸಲ್ಲಿಸಬೇಕೆಂಬ ನಿಯಮ ಕಡ್ಡಾಯ, ನವಚೀಣಾದಲ್ಲಿ ವೈದ್ಯಕೀಯ ಕಾಲೇಜುಗಳಿಗೆ ಸೇರಲು ನೂಕುನುಗ್ಗಲಿಲ್ಲ. ಏಕೆಂದರೆ ವೈದ್ಯರಾಗಿ ಬೇಕಾದಷ್ಟು ಹಣವನ್ನು ಸಂಗ್ರಹಿಸಿ. ದಿಢೀರ್ ಶ್ರೀಮಂತರಾಗುವ ಅವಕಾಶ ಚೀಣಾದಲ್ಲಿಲ್ಲ. ಸೇವಾ ಆದರ್ಶವಿದ್ದವರೇ ಅಲ್ಲಿ ವೈದ್ಯರಾಗುವುದು. ವೈದ್ಯರು ಹಣ ಸಂಗ್ರಹಿಸುವ ಯಂತ್ರಗಳಾಗುವುದಿಲ್ಲ. ಚೀಣಾದ ಪ್ರಾಚೀನ

ಪದ್ಧತಿಯಾದ ‘ಅಕ್ಯುಪಂಕ್ಚರ್’ ಚಿಕಿತ್ಸೆಗೆ ಈಗಲೂ ಅಲ್ಲಿ ಪುರಸ್ಕಾರವಿದೆ.

ಕುಟುಂಬ ಯೋಜನೆಯನ್ನು ಯಶಸ್ವಿಯಾಗಿ ಕಾರ್ಯರೂಪಕ್ಕೆ ತಂದಿರುವುದರಿಂದ ಚೀಣಾದ ನಗರಗಳಲ್ಲಿ ಕೇವಲ ಶೇಕಡ ಒಂದರಷ್ಟು ಮಾತ್ರ ಜನಸಂಖ್ಯೆ ಏರುತ್ತಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಶೇಕಡ ಒಂದೂವರೆಯಷ್ಟು ಮಾತ್ರ ಜನಸಂಖ್ಯೆ ಏರುತ್ತಿದೆ. ಸ್ತ್ರೀಯರು ಸಾಮಾನ್ಯವಾಗಿ ತಮ್ಮ ಇಪ್ಪತ್ತೈದನೆ ವಯಸ್ಸಿನಲ್ಲಿ ಮದುವೆಯಾಗುತ್ತಾರೆ. ಪುರುಷರು ಸಾಮಾನ್ಯವಾಗಿ ಮದುವೆಯಾಗುವುದು ತಮ್ಮ ಇಪ್ಪತ್ತೇಳನೆ ವಯಸ್ಸಿನಲ್ಲಿ.

## ಮಹಿಳೆಯರು

ನವಚೀಣಾದಲ್ಲಿ ಮಹಿಳೆಯರಿಗೆ ಪೂರ್ಣ ಸ್ವಾತಂತ್ರ್ಯವಿದೆ. ಚೀಣೀ ಮಹಿಳೆಯರು ಆಭರಣಗಳನ್ನು ಧರಿಸುವುದಿಲ್ಲ. ಸ್ನೋ ಪೌಡರ್‌ಗಳನ್ನು ಬಳಿದುಕೊಂಡು ಕೃತಕ ಸೌಂದರ್ಯವನ್ನು ಪ್ರದರ್ಶಿಸುವುದಿಲ್ಲ, ತರುಣರೂ ತರುಣಿಯರೂ ಪ್ರೀತಿಸಿ ಮದುವೆಯಾಗುತ್ತಾರೆ. ವಿವಾಹ ವಿಚ್ಛೇದನಕ್ಕೆ ಅವಕಾಶವಿದೆ. ಆದರೆ ವಿವಾಹ ವಿಚ್ಛೇದನಗಳು ಕಡಿಮೆ. ಮಕ್ಕಳು ಶಿಶುವಿಹಾರ ಮತ್ತು ಬಾಲವಿಹಾರಗಳಲ್ಲಿ ಬೆಳೆಯುತ್ತಾರೆ. ಮಹಿಳೆಯರು ಸಾಮಾನ್ಯವಾಗಿ ಪುರುಷರಂತೆ ನೀಲಿ ಬಣ್ಣದ ಷರಾಯಿ ಮತ್ತು ನೀಲಿಬಣ್ಣದ ಕೋಟನ್ನು ಧರಿಸುತ್ತಾರೆ. ತಲೆಗೂದಲನ್ನು ‘ಬಾಬ್’ ಮಾಡಿಕೊಳ್ಳುತ್ತಾರೆ. ಕಮ್ಯುನಿಸ್ಟ್ ಪಕ್ಷದಲ್ಲಿಯೂ ಮಹಿಳೆಯರಿಗೆ ಸ್ಥಾನವಿದೆ. ಮಹಿಳೆಯರು ಸ್ವತಂತ್ರವಾಗಿರುವುದರಿಂದ ಅಲ್ಲಿ ವೇಶ್ಯೆಯರಿಲ್ಲ. ೧೯೪೯ಕ್ಕಿಂತ ಹಿಂದೆ, ಷಾಂಗೈ ನಗರ ಒಂದರಲ್ಲಿಯೇ ಸುಮಾರು ಮೂವತ್ತನಾಲ್ಕು ಸಾವಿರ ವೇಶ್ಯೆಯರಿದ್ದರು. ನವ

ಚೀಣಾದ ಸರ್ಕಾರ ಬಂದೊಡನೆ, ಅವರೆಲ್ಲರಿಗೂ ಸೂಕ್ತ ವೈದ್ಯಕೀಯ ಚಿಕಿತ್ಸೆ ನೀಡಿ, ಲೈಂಗಿಕ ರೋಗಗಳಿಂದ ಮುಕ್ತರನ್ನಾಗಿ ಮಾಡಿ, ಶಿಕ್ಷಣ ಕೊಟ್ಟು, ಅವರನ್ನು ರಾಷ್ಟ್ರದ ಬೇರೆ ಬೇರೆ ಕ್ಷೇತ್ರಗಳಲ್ಲಿ ಗೌರವಾನ್ವಿತರಾಗಿ ಸೇವೆ ಸಲ್ಲಿಸಲು ಅವಕಾಶಮಾಡಿಕೊಟ್ಟಿತು. ಹಿಂದೆ ಚೀಣಾದಲ್ಲಿ ಹುಟ್ಟಿದ ಹೆಣ್ಣು ಮಕ್ಕಳ ಕಾಲುಗಳಿಗೆ ಕಬ್ಬಿಣದ ಬೂಟ್ಸ್ ಹಾಕಿದರೆ, ಅವರು ಸಾಯುವವರೆಗೂ ಹಾಗೆಯೇ ಇರುತ್ತಿತ್ತು. ಈಗ ಈ ದುರಭ್ಯಾಸ ಹೇಳಹೆಸರಿಲ್ಲದಂತಾಗಿದೆ.

**ಜನಜೀವನ**

ಇಂದು ಚೀಣಾದಲ್ಲಿ ಪ್ರವಾಸಿಗರು ಎಲ್ಲಿ ಸಂಚರಿಸಿದರೂ ನಿರ್ಮಲವಾದ ನಗರಗಳನ್ನೂ ಗ್ರಾಮಗಳನ್ನೂ ನೋಡಬಹುದು. ಬೀದಿ ನಾಯಿಗಳು, ನೊಣಗಳು, ಹೆಗ್ಗಣಗಳು, ಇಲಿಗಳು—ಅಲ್ಲಿ ಕಾಣುವುದು ಅಪರೂಪ. ರಸ್ತೆಗಳಲ್ಲಿ ಬಾಳೆಹಣ್ಣಿನ ಸಿಪ್ಪೆ, ಸಿಗರೇಟು ಚೂರು, ಕಾಗದದ ಚೂರು—ಇಂಥವು ಕಾಣುವುದಿಲ್ಲ. ಜನರು ರಸ್ತೆಯ ಮೇಲೆ ಉಗುಳುವುದಿಲ್ಲ. ಈ ಸ್ವಚ್ಛತೆಯನ್ನು ಗ್ರಾಮಾಂತರ ಪ್ರದೇಶದ ರಸ್ತೆಗಳಲ್ಲಿಯೂ ಕಾಣಬಹುದು. ರಸ್ತೆಗಳ ಸಂದಿಗೊಂದಿಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡುವ ದುರಭ್ಯಾಸ ಅಲ್ಲಿಲ್ಲ, ಹಳ್ಳಿ ಹಳ್ಳಿಗಳಲ್ಲಿ ಶುಚಿಯಾದ ಕಕ್ಕಸುಗಳು ನಿರ್ಮಿತವಾಗಿವೆ. ನೆಗಡಿ ಕೆಮ್ಮು ಬಂದಾಗ ಜನರು ಕರವಸ್ತ್ರಗಳಿಂದ ಬಾಯಿ ಮುಚ್ಚಿ ಕೆಮ್ಮುವುದು ಅಲ್ಲಿ ಅಭ್ಯಾಸವಾಗಿದೆ. ನೆಗಡಿ ಇತರರಿಗೆ ಹಬ್ಬಬಾರದೆಂಬುದೇ ಈ ಅಭ್ಯಾಸಕ್ಕೆ ಕಾರಣ. ಅಲ್ಲಿ ಮೈಗಳ್ಳರಿಲ್ಲ. ರಾಷ್ಟ್ರದ ಉತ್ಪತ್ತಿಯನ್ನು ಹೆಚ್ಚು ಮಾಡಲು ಶ್ರದ್ಧೆಯಿಂದ ಕೆಲಸ ಮಾಡಬೇಕೆಂಬ ಆಸಕ್ತಿ ಜನರಲ್ಲಿದೆ.

ಆತ್ಮಗೌರವ, ಕಾಯಕದಲ್ಲಿ ನಿಷ್ಠೆ, ರಾಷ್ಟ್ರಪ್ರೇಮ– ಇವು ಮೂರು ಜನತೆಯ ಆದರ್ಶ.

ಬೇಕಾದ ವಸ್ತುಗಳನ್ನು ತೆಗೆದುಕೊಂಡು, ನಿರ್ದಿಷ್ಟ ಸ್ಥಳದಲ್ಲಿ ಹಣವನ್ನು ಹಾಕುವ, ಯಾರೂ ನೋಡಿಕೊಳ್ಳದ ಅಂಗಡಿಗಳು ಚೀಣಾದ ಹಲವೆಡೆಗಳಲ್ಲಿವೆ. ಇಂತಹ ಅಂಗಡಿಗಳು ರಾಷ್ಟ್ರದ ಪ್ರಾಮಾಣಿಕತೆಯ ದ್ಯೋತಕಗಳು. ತಪ್ಪಿತಸ್ಥರಿಗೆ ಉಗ್ರ ಶಿಕ್ಷೆ ವಿಧಿಸುವುದರಿಂದ, ಭಯವೂ ಜನರಿಗಿದೆ. ಈ ಭಯವು ಪ್ರಾಮಾಣಿಕತೆಯನ್ನು ರೂಪಿಸಲು ಶಕ್ಯವಾಗಿದೆ. ನವ ಚೀಣಾದಲ್ಲಿ ಕಳ್ಳರಿಲ್ಲ, ಭಿಕ್ಷುಕರಿಲ್ಲ, ದರೋಡೆಕೋರರಿಲ್ಲ, ಜನರು ಯಾವ ಮತಕ್ಕಾದರೂ ವೈಯಕ್ತಿಕವಾಗಿ ಸೇರಿರಬಹುದು. ಆದರೆ ಮತೀಯ ತತ್ತ್ವಗಳನ್ನು ಪ್ರಚಾರಮಾಡಲು ಅಲ್ಲಿ ಅವಕಾಶವಿಲ್ಲ. ಎಲ್ಲರಿಗೂ ಉದ್ಯೋಗ, ಶಿಕ್ಷಣ, ಹೊಟ್ಟೆಗೆ ಸಾಕಾದಷ್ಟು ಆಹಾರ, ಉಡಲು ಬಟ್ಟೆ, ಇರಲು ವಸತಿ ದೊರಕಿರುವುದರಿಂದ ಜನರು ದೇವರಿಗೆ ಕಿರುಕುಳಕೊಡುವ ಗೋಜಿಗೆ ಹೋಗುವುದಿಲ್ಲ. ಜೀವನವನ್ನು ಉತ್ತಮಪಡಿಸಿಕೊಳ್ಳಲು ಜನರು ದುಡಿಯುತ್ತಾರೆ. ಜನರಿಗೆ ಜನತೆಯೇ ಇಂದು ಜನಾರ್ದನ, ಮತೀಯ ಘರ್ಷಣೆಗಳಿಗೆ ಅಲ್ಲಿ ಅವಕಾಶವಿಲ್ಲ.

ಚೀಣಾದಲ್ಲಿ ಸ್ವಂತ ಕಾರುಗಳನ್ನಿಟ್ಟ ಜನರ ಸಂಖ್ಯೆ ಬಹಳ ಕಡಿಮೆ. ಬೇಕಾದಾಗ ಜನರು ಟ್ಯಾಕ್ಸಿಗಳನ್ನು ಬಳಸುತ್ತಾರೆ. ಸೈಕಲ್ಲುಗಳೇ ಇಂದು ಜನಪ್ರಿಯ. ಜನಜೀವನದಲ್ಲಿ ವಿಲಾಸಕ್ಕೆ ಹೆಚ್ಚು ಅವಕಾಶವಿಲ್ಲ. ಬಂಡವಾಳಷಾಹಿ ರಾಷ್ಟ್ರಗಳಲ್ಲಿ ಕಾಣುವ ವೈಭವಪೂರ್ಣ ವಸ್ತುಗಳು ಚೀಣಾದಲ್ಲಿ ದುರ್ಲಭ. ಜನರು ತಮ್ಮ ಅತೃಪ್ತಿಯನ್ನು ವೃತ್ತಾಂತ ಪತ್ರಿಕೆಗಳಿಗೆ ಬರೆಯುವ ಮೂಲಕ ವ್ಯಕ್ತಪಡಿಸಲು ಸ್ವಾತಂತ್ರ್ಯವಿದೆ. ಇವುಗಳನ್ನು

ಸರ್ಕಾರ ಪರಿಶೀಲಿಸಿ, ಜನರ ಅತೃಪ್ತಿಗೆ ನಿಜವಾದ ಕಾರಣಗಳಿದ್ದರೆ ಅವುಗಳನ್ನು ಸರಿಪಡಿಸುತ್ತಾರೆ. ಆದರೆ ಜನರು ದುಷ್ಕರಗಳಲ್ಲಿ ತೊಡಗುವಂತಿಲ್ಲ.

## ೧೦. ಉಪಸಂಹಾರ

೧೯೨೦ ರಿಂದ ೧೯೪೯ ರ ವರೆಗೆ ಮಾವೋ ಅವರ ದೃಷ್ಟಿ ಚೀಣೀ ಜನತೆಯ ವಿಮೋಚನೆಯತ್ತ ಹರಿಯಿತು. ಅವರ ಈ ಇಪ್ಪತ್ತೊಂಬತ್ತು ವರ್ಷಗಳ ಸಾಧನೆಯಿಂದ ಜನತಾ ಚೀಣಾ ಗಣ ರಾಜ್ಯದ ನಿರ್ಮಾಣ ಸಾಧ್ಯವಾಯಿತು. ಎಂಥ ಕಷ್ಟವನ್ನಾದರೂ ಎದುರಿಸಲು ಅವರಿಗೆ ಚೈತನ್ಯ ನೀಡಿದ ಸ್ಫೂರ್ತಿಯೆಂದರೆ, ಅವರ ರಾಷ್ಟ್ರಪ್ರೇಮ. ಅವರು ಅನೇಕ ಬಾರಿ ಯುದ್ಧದಲ್ಲಿ ಸಾವಿನ ದವಡೆಯಿಂದ ಪಾರಾದರು. ಒಂದು ಸಾರಿ ಅವರ ಬಳಿಯೇ ಬಾಂಬು ಸಿಡಿದು, ಅವರ ಪ್ರಿಯ ಜನರು ಮಡಿದರು. ಇಂತಹ ವಿಪತ್ತುಗಳನ್ನು ಎದುರಿಸಿ, ತಮ್ಮ ಧ್ಯೇಯವನ್ನು ಅವರು ಸಾಧಿಸಿದರು. ಯುದ್ಧದ ಸಮಯದಲ್ಲಿ ಅವರಿಗೆ ಬೇಕಾದ ಯುಕ್ತ ಆಹಾರವೂ ಸಿಗುತ್ತಿರಲಿಲ್ಲ. ಚಿಯಾಂಗ್ ಕೈಷೆಕ್ ಅವರ ಬಳಿ ಆಧುನಿಕ ಅಸ್ತ್ರ ಶಸ್ತ್ರಗಳಿದ್ದುವು, ವಿಮಾನ ಬಲವಿತ್ತು, ಮಾವೋ ಅವರ ಬಳಿ ಉಜ್ಜ್ವಲ ರಾಷ್ಟ್ರಪ್ರೇಮವಿತ್ತು, ಅವರ ಸೈನ್ಯದಲ್ಲಿ ನಿಷ್ಠಾವಂತ ಸೈನಿಕರಿದ್ದರು. ಒಂದೊಂದು ಬಾರಿ ಅವರು ಮಂಜಿನ ಗಡ್ಡೆಯಿಂದ ಆವೃತವಾದ ಪರ್ವತವನ್ನು ತಮ್ಮ ಪರಿವಾರದೊಡನೆ ಹತ್ತಿ ಮುಂದೆ ಸಾಗಬೇಕಾಗುತ್ತಿತ್ತು. ಆಗ ಅವರು ಚಳಿ, ಮಳೆ, ಹಿಮಪಾತಗಳನ್ನು ಎದುರಿಸಬೇಕಾಗಿತ್ತು. ಕೆಲವು ರಾತ್ರಿಗಳನ್ನು ಮಳೆಯಲ್ಲಿ ನೆನೆದು, ಮಳೆಯಲ್ಲಿಯೇ ನಿದ್ದೆ ಮಾಡಬೇಕಾಗಿತ್ತು, ಆಯಾಸವಾದುದರಿಂದ ಮಳೆಯಲ್ಲಿಯೂ ಅವರಿಗೆ ನಿದ್ದೆ ಬರುತ್ತಿತ್ತು. ಅವರಿಗೆ ಎಷ್ಟು ಕಷ್ಟ ಬಂದರೂ,

ತಮ್ಮ ಪರಿವಾರದ ಕ್ಷೇಮಕ್ಕಾಗಿ ಅವರು ಯತ್ನಿಸುತ್ತಿದ್ದರು. ಎಷ್ಟು ಕಷ್ಟಗಳು ಬಂದರೂ ಉತ್ಸಾಹವನ್ನು ಕಳೆದುಕೊಳ್ಳದ ವ್ಯಕ್ತಿ ಅವರು.

ಇಂತಹ ಧೀರ ವ್ಯಕ್ತಿ, ಜನತಾ ಚೀಣಾ ಗಣರಾಜ್ಯದ ಅಧ್ಯಕ್ಷ ರಾದ ಬಳಿಕ, ತಮ್ಮ ದೇಶದ ಅಭ್ಯುದಯಕ್ಕಾಗಿ ಶ್ರಮಿಸಿದರೂ ವಿದೇಶಾಂಗ ನೀತಿಯಲ್ಲಿ ದಾರಿ ತಪ್ಪಿದರು. ೧೯೫೫ ರಲ್ಲಿ ಆಫ್ರಿಕ ಮತ್ತು ಏಷ್ಯದ ಇಪ್ಪತ್ತೊಂಬತ್ತು ರಾಷ್ಟ್ರಗಳು ಬಾಡುಂಗಿನಲ್ಲಿ ನಡೆದ ಸಮ್ಮೇಳನದಲ್ಲಿ ಸೇರಿದವು. ಚೀಣಾವನ್ನು ಆಹ್ವಾನಿಸಲು ಅನೇಕ ರಾಷ್ಟ್ರಗಳು ಇಷ್ಟಪಡಲಿಲ್ಲ. ಚೀಣಾವನ್ನು ಆಹ್ವಾನಿಸಲು ಆಸಕ್ತಿ ತೋರಿದ ರಾಷ್ಟ್ರಗಳೆಂದರೆ, ಬರ್ಮ ಮತ್ತು ಭಾರತ. ಕಡೆಗೆ ಸಮ್ಮೇಳನದಲ್ಲಿ ಭಾಗವಹಿಸಲು ಆಹ್ವಾನ ಚೀಣಾಕ್ಕೂ ಹೋಯಿತು. ಚೀಣಾದ ಪ್ರಧಾನಿ ಚೌ ಎನ್ ಲಾಯ್ ಅವರು ಸಮ್ಮೇಳನದಲ್ಲಿ ಭಾಗವಹಿಸಿದರು. ಅವರು ಸ್ಪಷ್ಟಪಡಿಸಿದ್ದು; ತಮ್ಮ ದೇಶ ಇತರ ರಾಷ್ಟ್ರಗಳ ಆಂತರಿಕ ವಿಷಯಗಳಿಗೆ ಪ್ರವೇಶಿ ಸುವುದಿಲ್ಲ, ಶಾಂತಿಯೇ ತಮ್ಮ ದೇಶದ ನೀತಿ–ಎಂದು.

ಆದರೆ ೧೯೫೯ ರಲ್ಲಿ ಚೀಣಾ ಟಿಬೆಟ್ಟನ್ನು ಆಕ್ರಮಿಸಿತು. ದಲಾಯಿ ಲಾಮ ಮತ್ತು ಅವರ ಪರಿವಾರಕ್ಕೆ ಕೇವಲ ಮಾನವೀ ಯತೆಯಿಂದ ನೆಹರೂ ಆಶ್ರಯ ನೀಡಿದುದು ಮಾವೋಗೆ ರುಚಿಸ ಲಿಲ್ಲ. ೧೯೬೨ ರಲ್ಲಿ ಭಾರತದ ಮೂವತ್ತೈದು ಸಾವಿರ ಚದರ ಮೈಲಿಗಳ ಪ್ರದೇಶವನ್ನು ಚೀಣಾ ಆಕ್ರಮಿಸಿ, ತಾನು ಬಲಿಷ್ಠರಾಷ್ಟ್ರ ವೆಂಬುದನ್ನು ಪ್ರದರ್ಶಿಸಿತು. ಈಗ ಪಾಕಿಸ್ತಾನದೊಡನೆ ಸ್ನೇಹ ಬೆಳೆಸಿಕೊಂಡು ಭಾರತಕ್ಕೆ ಕಿರುಕುಳಕೊಡಲು ಯತ್ನಿಸುತ್ತಿದೆ. ಈಚೆಗೆ ಬಾಂಗ್ಲಾ ದೇಶದೊಡನೆ ಸ್ನೇಹ ಬೆಳೆಸಲು ಆರಂಭಿಸಿದೆ. ಒಟ್ಟಿನಲ್ಲಿ ಚೀಣಾದ ಉದ್ದೇಶ, ಭಾರತದ ಯಶಸ್ಸಿಗೆ ವಿರೋಧವಾಗಿ ವರ್ತಿಸುವುದೇ ಆಗಿದೆ. ಚೀಣಾ ಭಾರತದೊಡನೆ ಪಂಚ

ಶೀಲಗಳನ್ನು ರೂಪಿಸಿಕೊಂಡು, ಕಡೆಗೆ ಅವುಗಳನ್ನು ಗಾಳಿಗೆ ತೂರಿ ಬಿಟ್ಟಿತು. ಪಂಚಶೀಲಗಳು ಹೀಗಿದ್ದವು:

೧. ಪರಸ್ಪರ ರಾಷ್ಟ್ರಗಳ ಭೂಪ್ರದೇಶಗಳ ಸಮಗ್ರತೆಗೆ ಗೌರವ
೨. ಪರಸ್ಪರ ರಾಷ್ಟ್ರಗಳ ಮೇಲೆ ಆಕ್ರಮಣ ಮಾಡದಿರುವುದು
೩. ರಾಷ್ಟ್ರಗಳ ಆಂತರಿಕ ವಿಷಯಗಳಿಗೆ ಪ್ರವೇಶಿಸದಿರುವುದು
೪. ಸಮಾನತೆ ಮತ್ತು ಪರಸ್ಪರ ಸಹಕಾರ
೫. ಶಾಂತಿಯುತ ಸಹಬಾಳ್ವೆ

ಚೀಣಾ ಭಾರತದ ವಿಷಯದಲ್ಲಿ ಮಾತ್ರವಲ್ಲ, ಇತರ ದೇಶಗಳ ವಿಷಯದಲ್ಲಿಯೂ ತನ್ನ ವಿಸ್ತರಣಾ ನೀತಿಯನ್ನು ಪ್ರಕಟಿಸಿತು. ಚೀಣಾ ಸೃಷ್ಟಿಸಿಕೊಂಡ ಭೂಪಟಗಳಲ್ಲಿ ಬರ್ಮ, ವಿಯೆತ್‌ನಾಮ್, ಸೋವಿಯೆತ್ ದೇಶ, ಕಂಪೂಚಿಯ, ಲಾವೋಸ್–ದೇಶಗಳ ಕೆಲವು ಭೂಭಾಗಗಳೂ ಚೀಣಾಕ್ಕೆ ಸೇರಿವೆಯೆಂದು ತೋರಿಸಲಾಗಿದೆ.

ಸಮಾಜವಾದಿ ರಾಷ್ಟ್ರವಾದ ಸೋವಿಯೆತ್ ದೇಶದಿಂದ ಪಡೆಯಬಹುದಾದ ಸಹಾಯವನ್ನೆಲ್ಲ ಪಡೆದು, ಕಡೆಗೆ ಆ ದೇಶವನ್ನು ಚೀಣಾ ತಿರಸ್ಕರಿಸಿತು. ಬಾಂಗ್ಲಾ ದೇಶದಲ್ಲಿ ಪಾಕಿಸ್ತಾನ ನರಹತ್ಯೆಯನ್ನು ನಡೆಸಿದಾಗ ಚೀಣಾದ ಸಹಕಾರ ಮತ್ತು ಸಹಾನುಭೂತಿ ಪಾಕಿಸ್ತಾನದ ಕಡೆಗೆ. ಚಿಲಿಯಲ್ಲಿ ಕ್ರಾಂತಿಯಾದಾಗ ಅದನ್ನು ಹತ್ತಿಕ್ಕಿದ ಪಕ್ಷಕ್ಕೇ ಚೀಣಾದ ಬೆಂಬಲ! ಅಂಗೋಲ ಪೋರ್ಚುಗೀಸರ ಹಿಡಿತದಿಂದ ಸ್ವತಂತ್ರವಾದಾಗ, ಅಂಗೋಲವನ್ನು ವಿರೋಧಿಸಿದ, ವರ್ಣದ್ವೇಷ ಬೆಳೆಸುತ್ತಿದ್ದ ದಕ್ಷಿಣ ಆಫ್ರಿಕಕ್ಕೇ ಚೀಣಾದ ಬೆಂಬಲ! ಸ್ವತಂತ್ರ ಅಂಗೋಲಕ್ಕೆ ಚೀಣಾ ಇನ್ನೂ ಮಾನ್ಯತೆ ನೀಡದಿರುವುದು ಅದರ ವಿಚಿತ್ರ ಮನೋವೃತ್ತಿಗೆ ನಿದರ್ಶನ. ಫ್ರೆಂಚ್ ಮತ್ತು ಅಮೆರಿಕದ ಹಿಡಿತದಿಂದ ಪಾರಾಗಲು ಹಲವು ವರ್ಷಗಳ ಸತತ ಪ್ರಯತ್ನ ಮಾಡಿ. ಅಪಾರ ತ್ಯಾಗ ಮಾಡಿ ಸ್ವತಂತ್ರವಾದ ವಿಯೆತ್‌ನಾಮಿಗೆ ಚೀಣಾ ತನ್ನ ಸ್ನೇಹಹಸ್ತವನ್ನು ಚಾಚಲಿಲ್ಲ, ತನ್ನ ಸ್ವಾರ್ಥಕ್ಕಾಗಿ ಅಮೆರಿಕದೊಡನೆ ಸ್ನೇಹ ಬೆಳೆಸಿ

ಕೊಂಡಿರುವ ಚೀಣಾ ಸಮಾಜವಾದದ ಸಿದ್ಧಾಂತಕ್ಕೇ ಅಪಚಾರ ವೆಸಗಿದೆ. ಅಮೆರಿಕ, ಸೋವಿಯೆತ್ ದೇಶದ ಶತ್ರು. ಆ ಪ್ರಬಲ ಶತ್ರುವಿನೊಡನೆ ಸ್ನೇಹ ಬೆಳೆಸಿಕೊಂಡರೆ ಸೋವಿಯೆತ್ ದೇಶದ ಮೇಲೆ ಪ್ರತೀಕಾರ ತೋರಿದಂತಾಗುತ್ತದೆ ಎಂಬ ದುರುದ್ದೇಶದಿಂದ ಅಮೆರಿಕದೊಡನೆ ಸ್ನೇಹ ಬೆಳೆಸಿಕೊಂಡು, ಮೌಲ್ಯಗಳನ್ನು ಚೀಣಾ ಗಾಳಿಗೆ ತೂರಿದೆ.

ಚೀಣಾ ವಿದೇಶಾಂಗ ನೀತಿ ಕುಟಿಲತೆಯಿಂದ ಕೂಡಿರುವಾಗ ಭಾರತ. ಚೀಣಾದ ವಿಷಯದಲ್ಲಿ ಎಷ್ಟು ಎಚ್ಚರ ವಹಿಸಿದರೂ ಸಾಲದು. ಭಾರತ ತನ್ನ ರಕ್ಷಣಾ ಬಲದಲ್ಲಿ ಚೀಣಾಕ್ಕೆ ಸರಿಸಮ ನಾಗಬೇಕು. ಈ ದಿಶೆಯಲ್ಲಿ ಹಿಂದೆ ಬಿದ್ದರೆ, ಭಾರತಕ್ಕೆ ಒಂದಲ್ಲ ಒಂದು ದಿನ ಚೀಣಾದಿಂದ ವಿಪತ್ತು ಸಂಭವಿಸುತ್ತದೆ. ಹೀಗೆಂದ ಮಾತ್ರಕ್ಕೆ ರಾಜಕೀಯವಾಗಿ ಚೀಣಾದೊಡನೆ ಸ್ನೇಹ ಬೆಳೆಸಿಕೊಳ್ಳ ಬಾರದೆಂದು ಭಾವಿಸಬಾರದು. ಸಮಾನತೆ ಇದ್ದಾಗ ಮೂಡುವ ರಾಜಕೀಯ ಸ್ನೇಹಕ್ಕೆ ಬಲಬರುತ್ತದೆ, ಗೌರವ ಬರುತ್ತದೆ. "ದೌರ್ಬಲ್ಯವೇ ಮರಣ, ಶಕ್ತಿಯೇ ಸಂಜೀವಿನಿ" ಎಂಬ ಸ್ವಾಮಿ ವಿವೇಕಾನಂದರ ಮಿಂಚು ನುಡಿಗಳನ್ನು ನಮ್ಮ ರಾಷ್ಟ್ರದ ಜನತೆ ಮತ್ತು ಸರ್ಕಾರ ಜ್ಞಾಪಕದಲ್ಲಿಟ್ಟಿರಬೇಕು. ನಮ್ಮ ರಾಷ್ಟ್ರ ಸರ್ವ ತೋಮುಖವಾಗಿ ವಿಕಾಸವಾದರೆ ಮಾತ್ರ ನಿರ್ಭೀತಿಯಿಂದ ಬದುಕುವುದು ಸಾಧ್ಯ.

ಮಾವೋ ತ್ಸೆ-ತುಂಗ್ ನವಚೀಣಾದ ನಿರ್ಮಾಪಕರು. ಚೀಣಾ ಪ್ರಗತಿಯನ್ನು ಸಾಧಿಸುತ್ತಿದೆ. ಆ ರಾಷ್ಟ್ರದ ಜನಜೀವನದ ಮಟ್ಟ ಇನ್ನು ಕೆಲವು ವರ್ಷಗಳಲ್ಲಿ .ಉತ್ತಮವಾಗುತ್ತದೆ. ಚೀಣಾಕ್ಕೆ ಹೊಸ ಜೀವವನ್ನು ಕೊಟ್ಟ ಮಾವೋ ಅವರ ಕಾರ್ಯ ಮಹತ್ವಪೂರ್ಣ, ಚೀಣಾದೇಶದ ಇತಿಹಾಸದಲ್ಲಿ ಅವರಿಗೆ ಶ್ರೇಷ್ಠ ಸ್ಥಾನವಿದೆ.

## ಕೆಲವು ಸಾಹಿತ್ಯ ಕೃತಿಗಳು

### ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ
ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ. ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ